# ಚಂದಮಾಮ

ಮಕ್ಕಳ ಕಥೆಯ ಮಾಸಪತ್ರಿಕೆ



# ಚಂದಮಾಮ

ಡಿಸೆಂಬರ್

## ಈ ಸಂಚಿಕೆಯಲ್ಲಿ



ಇವೆಲ್ಲಾ ತುಂಬಿವೆ.


**ಚಂದಮಾಮ** (ಹೊರಡುವ ಎಲ್ಲಾ ಭಾಷೆಗಳಲ್ಲಿಯೂ)

**ಬಿಡಿ ಪ್ರತಿ 50 ನಯೇ ಪೈಸೇ; ವಾರ್ಷಿಕ ಚಂದಾ ರೂ. 6-00**

TIC 53a



**1936** 20 ನೇ ವಯಸ್ಸಿನಲ್ಲಿ, ಗಂಗಾಧರನು ತನ್ನ ಪಟ್ಟಣದಲ್ಲೇ ಅತಿ ಅದೃಷ್ಟನು—ಈತನು, ಹೆಂಡತಿ, ಉದ್ಯೋಗ ಮತ್ತು ಹರ್ಕ್ಯುಲಿಸ್ ಸೈಕಿಲ್ ಪಡೆದಿದ್ದಾನೆ. ತರುಣನು ಇದಕ್ಕಿಂತ ಹೆಚ್ಚಿನನು ಬೇಕು ?

**ಇಂದು** ಲೋಕ ಎಷ್ಟು ಬದಲಾಗಿದೆ! ಗಂಗಾಧರನನ್ನು ಆತನ ಕಚೇರಿಗೆ ಒಯ್ಯುತ್ತಿದ್ದ ಹಳೆಯ ವಿಶ್ವಾಸಾರ್ಹ ಹರ್ಕ್ಯುಲಿಸ್ ಈಗ ಆತನ 20 ವರ್ಷ ಪ್ರಾಯದ ಮಗನನ್ನು ಕಾಲೇಜಿಗೆ ಒಯ್ಯುತ್ತಿದೆ!

## ಹರ್‌ಕ್ಯುಲಿಸ್ ಸೈಕಿಲ್‌ಗಿಂತ ಹೆಚ್ಚಿನದು. ಅದು ಜೀವಮಾನದ ಸಂಗಾತಿ




**ಹರ್ಕ್ಯುಲಿಸ್** ಪಡೆದವನನ್ನು ಕೇಳಿರಿ. ಇದು ಜೀವಮಾನದ ವರೆಗೆ ಬರುವುದೆನ್ನುತ್ತಾನೆ ಆತ. ಸುಮಾರು 50 ವರ್ಷಗಳಿಂದ ಶ್ರೇಷ್ಠ ಸೈಕಿಲ್‌ಗಳನ್ನು ತಯಾರಿಸಿರುವ ಜನರ ಅನುಭವದ ಬೆಂಬಲದಿಂದ, ಈಗ ಈ ಅಚ್ಚುಕಟ್ಟಾದ **ಹರ್ಕ್ಯುಲಿಸ್** ಸೈಕಿಲನ್ನು ಟಿ. ಐ. ಸೈಕಿಲ್ಸ್‌ನ ಅತ್ಯಾಧುನಿಕ ಕಾರ್ಖಾನೆಯಲ್ಲಿ ತಯಾರಿಸಲಾಗುತ್ತಿದೆ. ಇದರ ಉಜ್ವಲ ಸೌಂದರ್ಯವನ್ನು, ಇದರ ನಯವಾದ, ಸುಲಭವಾದ ಸವಾರಿಯನ್ನು, ನೀವು ಮೆಚ್ಚುವಿರಿ. **ಹರ್ಕ್ಯುಲಿಸ್** ನೀವು ಕೊಳ್ಳಬಲ್ಲ ಸೈಕಿಲ್‌ಗಳಲ್ಲಿ ಅತಿ ಶ್ರೇಷ್ಠ, ಆದರೂ ಇದರ ಬೆಲೆ ಮಿತವಾಗಿದೆ.

ನಿಮ್ಮ ಸೈಕಿಲ್ ಬಂಡವಾಳದ ಒಂದು ಹೂಡಿಕೆ- **ಹರ್‌ಕ್ಯುಲಿಸ್** ನಿಮ್ಮ ಹಣಕ್ಕೆ ಅತ್ಯುತ್ತಮ ಪ್ರತಿಫಲ

ಭಾರತದಲ್ಲಿ ತಯಾರಿಸಿದುದು: **ಟಿ. ಐ. ಸೈಕಿಲ್ಸ್ ಆಫ್ ಇಂಡಿಯಾ ಲಿಮಿಟೆಡ್, ಮದ್ರಾಸು**



















HVM. 313A-10 KN


ನಮ್ಮನ್ನು ನೋಡಿದಾಕ್ಷಣ ರಾಜ ಹೇಳ್ದ:
ಇಲ್ಲ ನೋಡ್ರಿ! ಈ ಮಂಗಳಗ್ರಹದಲ್ಲಿ ಯಾರು ನೆಟ್ಟಗೆ ನಿಲ್ಲುತ್ತಾರೋ ಅವರನ್ನು ಕಠಿಣವಾಗಿ ದಂಡಿಸಲಾಗುವುದು!


ತಕ್ಷಣವೇ ನಾನು ಕೈಗಳಮೇಲೆ ನಿಂತುಕೊಂಡೆನು. ಆದರೆ ನೀನು ಹಾಗೆ ಮಾಡಲು ಹೋಗಿ ಬಿದ್ದು ಬಿಟ್ಟೆ.... ಆಗ ನನಗೆ ಎಚ್ಚರವಾಯ್ತು!


ಹಾಗೋ.... ಇಲ್ಲಿಯೇ, ಈಗಲೇ ನಾವು ಕೈಗಳ ಮೇಲೆ ನಿಲ್ಲಲು ಪ್ರಯತ್ನಿಸೋಣ!
ನಾನು ಸಿದ್ಧನಾಗಿದ್ದೇನೆ


ಕಿಟ್ಟು ಸುಲಭವಾಗಿ ಕೈಗಳ ಮೇಲೆ ನಿಂತನು. ಆದರೆ ಪುಟ್ಟು ಹಾಗೆ ಮಾಡಲು ಪ್ರಯತ್ನಿಸಿದಾಗ ಕೂಡಲೇ ಕೆಳಗೆ ಬಿದ್ದು ಬಿಟ್ಟನು.


ಈ ನಕ್ಲಿ ಪರಾಕ್ರಮದಿಂದ ಏನೂ ಉಪಯೋಗವಿಲ್ಲ, ಪುಟ್ಟು! ನೀನು ವ್ಯಾಯಾಮ ಮಾಡಿ, ಹಾಲು ಕುಡಿದು, ಡಾಲ್ಡದಿಂದ ತಯಾರಿಸಿದ ಆಹಾರ ತಿಂದು ಹೆಚ್ಚು ಬಲಿಷ್ಠನಾಗಬೇಕು.

# ಆರೋಗ್ಯವನ್ನು ಇಚ್ಛಿಸುವವರು ಯಾವಾಗಲೂ ಲೈಫ್‌ಬಾಯ್‌ಯಿಂದ ಸ್ನಾನ ಮಾಡುತ್ತಾರೆ

ಆಟಗಳಲ್ಲಿ ಭಾಗ ವಹಿಸುವುದು ಆರೋಗ್ಯಕ್ಕೆ ಅತ್ಯಾವಶ್ಯಕವಾಗಿದೆ — ಆದರೆ ನಾವು ಆಟ ಆಡುವಾಗ ಅಥವಾ ಕೆಲಸ ಮಾಡುವಾಗ ಯಾವಾಗಲೂ ನಮ್ಮ ಮೈಕೈಗಳಲ್ಲಿ ಕೊಳೆಯಾಗುತ್ತದೆ. ಕೊಳೆಯಲ್ಲಿ ರೋಗದ ಕ್ರಿಮಿಗಳಿರುತ್ತವೆ ಮತ್ತು ಅವುಗಳಿಂದ ನಮ್ಮ ಆರೋಗ್ಯಕ್ಕೆ ಸದಾ ಅಪಾಯವಿರುತ್ತದೆ. ಲೈಫ್‌ಬಾಯ್ ಸೋಪು ಕೊಳೆಯ ಕ್ರಿಮಿಗಳನ್ನು ತೊಳೆದು ತೆಗೆಯುತ್ತದೆ ಮತ್ತು ನಿಮ್ಮನ್ನು ರಕ್ಷಿಸುತ್ತದೆ.

ಲೈಫ್‌ಬಾಯ್‌ಯಿಂದ ಸ್ನಾನ ಮಾಡುವುದರಿಂದ ನಿಮಗೆ ಉಲ್ಲಾಸವುಂಟಾಗುತ್ತದೆ; ಆಯಾಸ ನಿವಾರಣೆಯಾಗುತ್ತದೆ. ಲೈಫ್‌ಬಾಯ್ ಸೋಪಿನಿಂದ ಪ್ರತಿದಿನವೂ ಸ್ನಾನ ಮಾಡಿರಿ — ನಿಮ್ಮ ಆರೋಗ್ಯವನ್ನು ಕೊಳೆಯ ಕ್ರಿಮಿಗಳಿಂದ ರಕ್ಷಿಸಿರಿ.




L 265-50 KN

ಹಿಂದುಸ್ಥಾನ್ ಲೀವರ್ ಲಿಮಿಟೆಡ್, ಮುಂಬಯಿ, ಅವರಿಂದ ತಯಾರಿಸಲ್ಪಟ್ಟದ್ದು.

ವಿಜಯವಂತವಾಗಿ ನಡೆಯುತ್ತಿದೆ....



ದೇವರ್ ಫಿಲಿಂಸ್ ರವರ

# ನೀಲಮಲೈ ತಿರುಡನ್

ತಮಿಳು

ಡೈರೆಕ್ಷನ್.... ಎಂ.ಎ.ತಿರುಮುಗಂ

ಸ್ಟುಡಿಯೂ...ವಾಹಿನಿ

# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

**ಜೀ**ವನವೆಂಬುದು ಸುಖದುಃಖಗಳ ಸಮ್ಮಿಶ್ರಣದಿಂದ ಕೂಡಿಕೊಂಡಿರುವಂತಹುದು; ಔಷಧಮಿಶ್ರಣದ ಹಾಗೆ. ಔಷಧಮಿಶ್ರಣವು ಸರಿಯಾಗಿರುವುದೋ ಇಲ್ಲವೋ ಎಂದು ನೋಡಿಕೊಳ್ಳಲು ಡಾಕ್ಟರರು-ವೈದ್ಯರು ಶ್ರದ್ಧೆ ತೆಗೆದು ಕೊಳ್ಳಬೇಕು. ಇಲ್ಲದಿದ್ದರೆ ಔಷಧವು ವಿಷವಾದೀತು. ಜೀವನದ ಸುಖದುಃಖ ಮಿಶ್ರಣದಲ್ಲಿಯೂ ಸರಿಯಾದ ಎಚ್ಚರಿಕೆ ತೆಗೆದುಕೊಳ್ಳಬೇಕಾದುದು ಪ್ರತಿಯೊಬ್ಬ ಯಜಮಾನನ ಕರ್ತವ್ಯ. ಯಜಮಾನನ ಅಲಕ್ಷ್ಯದಿಂದ ಮನೆಯೊಳಗಿನ ವ್ಯವಸ್ಥೆಗಳು ತಾರುಮಾರುಗೊಳ್ಳುತ್ತವೆ. ಯಜಮಾನನಾದವನು ಆಯಾಕಾಲಕ್ಕೆ ತಕ್ಕತಕ್ಕರೀತಿಯ ವ್ಯವಸ್ಥೆಗಳನ್ನು ಏರ್ಪಡಿಸಿಕೊಂಡು ಮನೆ ನಡೆಸಬೇಕು. ಹೀಗೆಯೇ ದೇಶಕ್ಕೂ ಬೇಕು. ದೇಶವನ್ನಾಳುವ ರಾಜನು ಎಚ್ಚರಿಕೆಯಿಂದ ಪ್ರಜೆಗಳನ್ನು ಆಳಬೇಕು. ಈ ಪ್ರಕಾರ ಯಜಮಾನ, ಅಥವಾ ರಾಜನ ಕರ್ತವ್ಯವನ್ನು ಎಚ್ಚರ ಗೊಳಿಸುವಂತೆ, ಬೋಧಿಸುತ್ತಿದೆ ಈ ಸಂಚಿಕೆಯಲ್ಲಿರುವ 'ಅರಾಜಕತೆ' ಎಂಬ ಜಾತಕಕಥೆ.

ಸಂಪುಟ ೧೯ ಡಿಸೆಂಬರು ೧೯೫೭ ಸಂಚಿಕೆ ೬





CHITRA

# ಮು ಖ ಚಿ ತ್ರ

ಪಾಂಡವರ ಅಜ್ಞಾತವಾಸ ದೀಕ್ಷೆ ಮುಗಿಯುವುದರೊಳಗೆ ಅವರ ಇರುವಿಕೆಯನ್ನು ಗೊತ್ತುಹಚ್ಚಿಬಿಟ್ಟರೆ ಮತ್ತೆ ಹನ್ನೆರಡು ವರ್ಷ ಅರಣ್ಯವಾಸ, ಮತ್ತೊಂದು ವರ್ಷ ಅಜ್ಞಾತವಾಸಗಳನ್ನು ಅವರು ಅನುಭವಿಸಬೇಕಾಗುತ್ತದೆ. ಆದುದರಿಂದ ದುರ್ಯೋಧನನು ತನ್ನ ಗೂಢಚಾರರನ್ನು ದೇಶದೇಶಗಳಿಗೆ ಕಳುಹಿಸಿ ಅವರನ್ನು ಶೋಧಿಸುವ ಕೆಲಸಮಾಡಿಕೊಂಡೇ ಇದ್ದನು. ಅವರು ನಗರ, ಕಾಡು, ಗುಡ್ಡಗಳಲ್ಲೆಲ್ಲಾ ಪಾಂಡವರನ್ನು ಹುಡುಕಿ ಅಸಫಲರಾಗಿ ಹಿಂದಿರುಗುತಿದ್ದರು.

ಕಡೆಗೆ ದುರ್ಯೋಧನನು ಭೀಷ್ಮದ್ರೋಣಾದಿಗಳನ್ನು ಸೇರಿಸಿ ಮುಂದಿನ ಕರ್ತವ್ಯವೇನೆಂದು ಕೇಳಿದನು. ಪಾಂಡವರು ಸತ್ತಿರಬಹುದೆಂದು ಕೆಲವರಂದರು. ಕೃಪಾಚಾರ್ಯನು ಮಾತ್ರ, "ನಾವು ಎಲ್ಲಾ ದೇಶಗಳಮೇಲೂ ದಂಡೆತ್ತುವ; ಪಾಂಡವರು ಯಾವ ದೇಶದಲ್ಲಿದ್ದರೂ, ಅವರಿಗೆ ಆಶ್ರಯವಿತ್ತವನ ಸಹಾಯಕ್ಕಾಗಿ ಯುದ್ಧಭೂಮಿಗೆ ಬಂದೇತೀರುತ್ತಾರೆ. ಆಗ ನಾವು ಸುಲಭವಾಗಿ ಅವರನ್ನು ಕಂಡು ಹಿಡಿಯಬಹುದು" ಎಂದ.

ಅದರಮೇಲೆ ಸುಶರ್ಮ ಇನ್ನೊಂದು ಸೂಚನೆ ಮಾಡಿದ. "ತನ್ನ ಬಾವನೆಂಟನಾದ ಕೀಚಕನ ಬೆಂಬಲದಿಂದ ವಿರಾಟರಾಜನು ತುಂಬ ಕೊಬ್ಬಿದ್ದಾನೆ. ಎಷ್ಟೋ ಸಾರಿ ನನ್ನಮೇಲೆ ಯುದ್ಧಕ್ಕೆ ಬಂದು ಸೋಲಿಸಿದ್ದಾನೆ. ಈಗ ಆ ಕೀಚಕನನ್ನು ಗಂಧರ್ವರು ಸಂಹಾರಮಾಡಿದುದರಿಂದ ನಾವು ಸುಲಭವಾಗಿ ವಿರಾಟರಾಜನನ್ನು ಜಯಿಸಿಬಿಡಬಹುದು. ನನ್ನ ಹಗೆಯನ್ನೂ ತೀರಿಸಬಹುದು." ಎಂದ.

ದುರ್ಯೊಧನನು ತನ್ನ ಸೇನೆಯನ್ನು ಎರಡು ಭಾಗಮಾಡಿ, ಒಂದನ್ನು ಸುಶರ್ಮನಿಗಿತ್ತು, ಮತ್ಸ್ಯದೇಶದಮೇಲೆ ಕಳಿಸಿದನು. ಬಹುಳ ಸಪ್ತಮಿಯದಿನ ಸುಶರ್ಮನು ತನ್ನ ಸೇನೆಯೊಂದಿಗೆ ಮತ್ಸ್ಯದೇಶದಮೇಲೆ ಬಿದ್ದು ವಿರಾಟರಾಜನ ಗೋಗಣಗಳನ್ನು ಸ್ವಾಧೀನಪಡಿಸಿಕೊಂಡನು.

ಈ ಸಮಾಚಾರ ಕೇಳಿ ವಿರಾಟನು ಯುದ್ಧಕ್ಕೆ ಹೊರಟನು. ಅವನ ಹಿಂದೆ ಬೃಹನ್ನಳೆಯ ಹೊರತು ಉಳಿದ ಪಾಂಡವರೂ ಹೊರಟರು. ಈ ಯುದ್ಧದಲ್ಲಿ ಸುಶರ್ಮನು ವಿರಾಟನನ್ನು ಸೋಲಿಸಿ ಸೆರೆ ಹಿಡಿದುಬಿಟ್ಟನು. ಇದನ್ನು ನೋಡಿ ಧರ್ಮರಾಯನು ಭೀಮನನ್ನು ಸುಶರ್ಮನಮೇಲೆ ಕಳಿಸಿದನು. ಭೀಮನು ಸುಶರ್ಮನನ್ನು ಓಡಿಸಿ, ವಿರಾಟನನ್ನು ಬಂಧಮುಕ್ತಮಾಡಿದುದಲ್ಲದೆ ಓಡಿಹೋಗುವ ಸುಶರ್ಮನನ್ನು ಬೆಂಬತ್ತಿ ಸೆರೆ ಹಿಡಿದುಬಿಟ್ಟನು.



# ಅರಾಜಕತೆ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಆಳುತ್ತಿದ್ದನು. ಆ ಕಾಲದಲ್ಲಿ ಉತ್ತರ ಪಾಂಚಾಲ ದೇಶದ ರಾಜಧಾನಿಯಾದ ಕಾಂಪಿಲ್ಯನಗರಕ್ಕೆ ಪಾಂಚಾಲನೆಂಬಾತ ರಾಜನಾಗಿದ್ದನು. ಆತನು ಭೋಗಲಾಲಸನೂ, ಅನೀತಿಪರನೂ ಆಗಿದ್ದನು.

"ಯಥಾರಾಜ ತಥಾಪ್ರಜಾ" ಎಂಬ ಹಾಗೆ, ರಾಜನಂತೆಯೆ ಮಂತ್ರಿಗಳೂಸಹ ದುರಾಚಾರಿಗಳಾಗಿದ್ದರು. ಪ್ರಜೆಗಳಮೇಲೆ ಅನೇಕ ಬಗೆಯ ಹೊಸತೆರಿಗೆಗಳನ್ನು ಹೊರಿಸುತ್ತಿದ್ದರು. ರಾಜ್ಯದಲ್ಲಿ ಅರಾಜಕತೆ ತಲೆ ಎತ್ತಿತ್ತು. ಹಗಲು ರಾಜಭಟರ ಕಾಟ, ರಾತ್ರಿ ಕಳ್ಳಕಾರರ ಕಾಟ ವಿಪರೀತವಾಯಿತು. ಅದರಿಂದ ನಗರವಾಸಿಗಳು ತಮ್ಮ ತಮ್ಮ ಮನೆಗಳಿಗೆ ಬೀಗಬಡೆದು, ಮನೆ ಬಾಗಿಲಮುಂದೆ ಮುಳ್ಳುಗಿಡ ಗಂಟೆಗಳನ್ನು ಅಡ್ಡವಿಟ್ಟು, ತಮ್ಮ ಹೆಂಡತಿ ಮಕ್ಕಳೊಂದಿಗೆ ಅರಣ್ಯಕ್ಕೆ ಹೋಗಿ ತಲೆಮರೆಯಿಸಿ ಕೊಳ್ಳುತ್ತಿದ್ದರು. ಅವರು ಹಗಲನ್ನೆಲ್ಲಾ ಅಡವಿಯಲ್ಲಿ ಕಳೆದು ಅರ್ಧ ರಾತ್ರಿ ವೇಳೆಗೆ ತಮ್ಮ ಮನೆಗೆ ಬರುತ್ತಿದ್ದರು.

ಈ ಸಮಯದಲ್ಲಿ ಬೋಧಿಸತ್ವನು ನಗರದಾಚೆಯಿದ್ದ ಬೂರುಗವೃಕ್ಷದ ಅಧಿಷ್ಠಾನ ದೇವತೆಯಾಗಿ ಜನಿಸಿದನು. ರಾಜನು ಆ ವೃಕ್ಷಕ್ಕೆ ಪ್ರತಿ ವರ್ಷ ಸುಮಾರು ಸಾವಿರ ವರಹಗಳನ್ನು ವೆಚ್ಚಮಾಡಿ ಪೂಜೆ ಸಲ್ಲಿಸುತ್ತಿದ್ದನು; ಉತ್ಸವಗಳನ್ನೇರ್ಪಡಿಸುತ್ತಿದ್ದನು. "ಪಾಪ, ನನ್ನನ್ನು ಶ್ರದ್ಧಾ ಭಕ್ತಿಗಳಿಂದ ಆರಾಧಿಸುವ ಈ ರಾಜನು ಅವಿವೇಕದಿಂದ ರಾಜ್ಯವನ್ನು ಅಧೋಗತಿಗಿಳಿಸುತ್ತಿದ್ದಾನೆ. ಈತನಿಗೆ ಬುದ್ಧಿ ಹೇಳುವವರಿಲ್ಲ" ಎಂದುಕೊಂಡ ಬೂರುಗದೇವ.

ಕೂಡಲೇ ಬೂರುಗದೇವನು ರಾಜನಿಗೆ ಕನಸಿನಲ್ಲಿ ಕಾಣಿಸಿಕೊಂಡನು. ದೇದೀಪ್ಯಮಾನವಾದ ರೂಪವನ್ನು ಕಂಡು ರಾಜನು ವಿನೀತನಾಗಿ "ದೇವಾ, ನೀವು ಯಾರು? ಯಾಕೆಬಂದಿರಿ?" ಎಂದು ಕೇಳಿದನು.

"ರಾಜನೇ, ನಾನು ಬೂರುಗದೇವನು. ನಿನಗೆ ಬುದ್ಧಿ ಹೇಳಲು ಬಂದಿರುವೆನು" ಎಂದ ಬೂರುಗದೇವ. "ಅಗತ್ಯವಾಗಿ ಹೇಳ



ಬಹುದು" ಎಂದು ಕೇಳಿಕೊಂಡ ರಾಜ. "ಎಲೆ, ರಾಜನೇ, ನಿನಗೆ ರಾಜ್ಯಭಾರದಲ್ಲಿ ಪ್ರತಿ ಹೆಜ್ಜೆಗೂ ಅಶ್ರದ್ಧೆ ಕಾಣಿಸುತ್ತಿದೆ. ಎಂತಲೇ ನಿನ್ನ ರಾಜ್ಯದಲ್ಲಿ ಲಂಚಕೋರತನ, ಪುಂಡರಹಾವಳಿ ವಿಪರೀತವಾಗಿದೆ. ರಾಜ್ಯಭಾರ ವಿಷಯದಲ್ಲಿ ಅಶ್ರದ್ಧೆವಹಿಸುವ ರಾಜನು ಈ ಲೋಕದಲ್ಲಿ ರಾಜ್ಯವನ್ನು ಕಳೆದುಕೊಂಡು, ನರಕದಲ್ಲಿ ನರಕವಾಸವನ್ನು ಅನುಭವಿಸುವನು. ರಾಜನಂತೆ ಇತರರೂ ಅಶ್ರದ್ಧೆವಹಿಸುವರು. ರಾಜನು ಎಂದಿಗೂ ತನ್ನ ಕರ್ತವ್ಯದಲ್ಲಿ ಅಶ್ರದ್ಧೆ ತೋರಬಾರದು" ಎಂದ ಬೂರುಗದೇವ.

"ದೇವಾ, ಹಾಗಾದರೆ ನಾನೇನು ಮಾಡಬೇಕೀಗ?" ಎಂದು ರಾಜ ಕೇಳಿದ. "ಈಗಲಾದರೂ ನಿನ್ನ ರಾಜ್ಯಭಾರದ ವಿಷಯದಲ್ಲಿ ಶ್ರದ್ಧೆವಹಿಸಿ ಅರಾಜಕತೆಯನ್ನು ತೊಲಗಿಸಿ, ನಿನ್ನ ರಾಜ್ಯವನ್ನು ಕಾಪಾಡಿಕೊ" ಎಂದು ಹೇಳಿ ಬೂರುಗದೇವನು ಅದೃಶ್ಯನಾದನು. ರಾಜನಿಗೆ ಜ್ಞಾನೋದಯವಾಯಿತು. ಆತನು ತನ್ನ ರಾಜ್ಯದ ಸ್ಥಿತಿಗತಿಗಳನ್ನು ನೇರವಾಗಿ ನೋಡಲು ನಿರ್ಧರಿಸಿದನು.

ಮರುದಿನ ಮುಂಜಾನೆ ತನ್ನ ಮಂತ್ರಿಗಳನ್ನು ಬರಮಾಡಿಕೊಂಡು "ಮಂತ್ರಿವರ್ಯರೇ, ನಾನು ಕೆಲವು ದಿನ ರಾಜ್ಯವನ್ನು ಬಿಟ್ಟು ಹೋಗಬೇಕಾಗಿದೆ. ತಾವು ರಾಜ್ಯವನ್ನು ಸುಗಮವಾಗಿ ನಡೆಯಿಸಿಕೊಂಡು ಬರಬೇಕು" ಎಂದು ಹೇಳಿ, ರಾಜಪುರೋಹಿತನನ್ನು ಸಂಗಡ ಕರೆದುಕೊಂಡು, ವೇಷ ಮರೆಯಿಸಿಕೊಂಡು ನಗರದಲ್ಲೆಲ್ಲಾ ಸುತ್ತಾಡಲು ಹೊರಟನು.

ನಗರದಾಚೆ ಒಬ್ಬ ವೃದ್ಧನು ಕಾಣಿಸಿದನು. ಆತನು ತನ್ನ ಮನೆಗೆ ಬೀಗ ಹಾಕಿ, ಮನೆಯ ಸುತ್ತಲೂ ಮುಳ್ಳು ಗಿಡಗಳನ್ನು ಹೊದಿಸಿ ಮುದಿ ಮಕ್ಕಳೊಂದಿಗೆ ಅಡವಿಗೆ ಓಡಿ ಹೋದನು. ಕತ್ತಲಾದನಂತರ ಮನೆಗೆ ಹಿಂತಿರುಗಿ ಬಂದು ಬಾಗಿಲು ತೆಗೆಯುತ್ತಿರಲು ಕಾಲಿಗೆ ಒಂದು ಮುಳ್ಳು ಚುಚ್ಚಿಕೊಂಡಿತು. ಆತನು ಕುಳಿತು ಕಾಲಿಗೆ ಚುಚ್ಚಿದ್ದ ಮುಳ್ಳನ್ನು ತೆಗೆಯುತ್ತಾ "ನನ್ನ ಕಾಲಿಗೆ ಈ ಮುಳ್ಳು ಚುಚ್ಚಿಕೊಂಡಂತೆ ಪಾಂಚಾಲ ರಾಜನಿಗೆ ಯುದ್ಧದಲ್ಲಿ ಬಾಣ ಚುಚ್ಚಿಕೊಳ್ಳಲಿ" ಎಂದು ಶಾಪ ಕೊಟ್ಟನು.

ಆತನ ಮಾತುಕೇಳಿ ರಾಜಪುರೋಹಿತನು "ಅಯ್ಯಾ, ತಾವು ವಯೋವೃದ್ಧರು. ಕಣ್ಣು ಕಾಣಿಸದೆ ನೀವು ಮುಳ್ಳಿನಮೇಲೆ ಕಾಲಿಟ್ಟಿರಿ. ಅದು ರಾಜನ ದೋಷ ಹೇಗೆ ಆದೀತು?" ಎಂದು ಕೇಳಿದನು.

"ರಾಜನು ಅನೀತಿಪರನಾದುದರಿಂದ ಅಧಿಕಾರಿಗಳು ದುಷ್ಟರಾದರು. ಹಗಲು ಹೊತ್ತು ರಾಜಭಟರ ಕಾಟ, ರಾತ್ರಿ ಕಳ್ಳರ ಕೋಟಲೆ ಸಹಿಸಲಾರದೆ ಪ್ರಜೆಗಳು ಮನೆಗಳಿಗೆ ಮುಳ್ಳು ಬೇಲಿಯನ್ನು ಅಡ್ಡವಿಟ್ಟು ಮುದಿಮಕ್ಕಳೊಂದಿಗೆ ಅಡವಿಗೆ ಓಡಿಹೋಗುತ್ತಿದ್ದಾರೆ. ರಾಜ್ಯದಲ್ಲಿ ಸುವ್ಯವಸ್ಥೆ ನೆಲೆಸಿದ್ದರೆ ನನ್ನ ಕಾಲಿಗೆ ಮುಳ್ಳು ಚುಚ್ಚಿಕೊಳುವ ಸಂಭವವಿರುತ್ತಿರಲಿಲ್ಲ" ಎಂದ ವೃದ್ಧ.

ರಾಜನು ತನ್ನ ಪುರೋಹಿತನ ಕಿವಿಯಲ್ಲಿ "ಆತನ ಮಾತಿನಲ್ಲಿ ಸತ್ಯವಿದೆ. ನಾವು ನಗ



ರಕ್ಕೆ ಹಿಂತಿರುಗಿ ರಾಜ್ಯಭಾರವನ್ನು ಯೋಗ್ಯ ರೀತಿಯಲ್ಲಿ ಮಾಡೋಣ" ಎಂದ.

"ಪ್ರಭೂ, ಅವಸರಬೇಡ." ಎಂದು ಪುರೋಹಿತನು ರಾಜನನ್ನು ಮತ್ತೊಂದು ಗ್ರಾಮಕ್ಕೆ ಕರೆದುಕೊಂಡುಹೋದನು. ಅಲ್ಲಿ ಅವರಿಗೆ ಒಬ್ಬ ಸ್ತ್ರೀ ಕಾಣಿಸಿದಳು. ಆಕೆಗೆ ಮದುವೆ ವಯಸ್ಸಿಗೆ ಬಂದ ಇಬ್ಬರು ಕುವರಿಯರಿದ್ದರು. ಅವರನ್ನು ಅಡವಿಗೆ ಕರೆದೊಯ್ಯಲು ಇಷ್ಟವಿಲ್ಲದೆ ಮನೆಯಲ್ಲೇ ಅಡಗಿಸಿಟ್ಟು ಅವರಿಗೆ ಅಗತ್ಯವಾದ ವಸ್ತುಗಳನ್ನು ತಾನೇ ತಂದು ಕೊಡುತ್ತಿದ್ದಳು. ಆಕೆ ಎಲೆ ಕೀಳಲು ಮರಹತ್ತಿ ಕಾಲುಜಾರಿ ಕೆಳಗೆ ಬಿದ್ದುಬಿಟ್ಟಳು. ಆಗ ಆಕೆ "ಈ ರಾಜನು ಸಾಯಲಿ. ಇವನು ಜೀವಿಸಿರುವಷ್ಟು ಕಾಲ ಕನ್ಯೆಯರಿಗೆ ಮದುವೆಯಾಗುವಂತಿಲ್ಲ" ಎಂದಳು. ಪುರೋಹಿತನು ಆಕೆಯ ಬಳಿಗೆ ಬಂದು "ಬುದ್ಧಿಹೀನಳೇ, ರಾಜ್ಯದಲ್ಲಿ ಪ್ರತಿಕನ್ಯೆಗೂ ಗಂಡನನ್ನು ಹುಡುಕಿ ಕೊಡುವುದೇ ರಾಜನ ಕೆಲಸವೇ?" ಎಂದು ಕೇಳಿದನು.

"ದೇಶದಲ್ಲಿ ವಿಪರೀತವಾಗಿದೆ. ದುರುಳರು ತಲೆ ಎತ್ತುತ್ತಿದ್ದಾರೆ. ಹಗಲು ರಾಜಭಟರ ಭಯ, ರಾತ್ರಿ ಕಳ್ಳರಹಾವಳಿ. ಹೀಗಿರಲು ಕನ್ಯೆಯರಿಗೆ ಗಂಡಂದಿರು ಹೇಗೆಸಿಗುತ್ತಾರೆ?" ಎಂದಳು ಆ ಹೆಂಗಸು.

ರಾಜನು ಪುರೋಹಿತರೊಂದಿಗೆ ಮತ್ತೊಂದು ಗ್ರಾಮಕ್ಕೆ ಹೋದನು. ಹೊಲವನ್ನು ಉಳುತ್ತಿದ್ದ ರೈತನೊಬ್ಬನು ಕಾಣಿಸಿದ. ಅವನು ಉಳುಮೆ ಮಾಡುತ್ತಿದ್ದಾಗ ನೇಗಿಲ



ಗುಳ ಒಂದು ಎತ್ತಿಗೆ ಚುಚ್ಚಿಕೊಂಡು ಅದು ಕುಸಿದುಬಿತ್ತು. ಕೂಡಲೇ ರೈತನು "ಈ ಪಾಂಚಾಲರಾಜನ ಎದೆಗೆಶೂಲ ಚುಚ್ಚಿ ಆತ ಬೀಳಬಾರದೆ. ನಮ್ಮೆಲ್ಲರ ಕಷ್ಟಗಳು ನಿವಾರಣೆಯಾಗುವುವು" ಎಂದ.

ರೈತನನ್ನು ಕುರಿತು ಪುರೋಹಿತನು "ಅಯ್ಯಾ, ರೈತನೇ, ನಿನ್ನ ಅಶ್ರದ್ಧೆಯಿಂದ ಎತ್ತಿಗೆ ಗಾಯವಾಗಿ ಅದುಕುಸಿದು ಬಿತ್ತು. ರಾಜನೇನು ಮಾಡಿದ?" ಎಂದ.

"ರಾಜನ ತಪ್ಪಲ್ಲದೆ ಮತ್ತೆ ಯಾರದು? ಹಗಲು ರಾಜಭಟರ ಹಾವಳಿ, ರಾತ್ರಿ ಕಳ್ಳ ಕಾಕರಕಾಟ. ನಮ್ಮಾಕೆ ನನಗಾಗಿ ತರುತ್ತಿದ್ದ ಬುತ್ತಿಯನ್ನು ಯಾರೊ ದುರುಳರು ಕಸಿದು ಕೊಂಡರು. ಅವಳು ಮತ್ತೆ ಅಡಿಗೆ ಮಾಡಿ ತರ ಬೇಕು. ಇತ್ತ ನನಗೆ ಹಸಿವು. ಅವಳು ಯಾವಾಗ ಬರುವಳೋ ಎಂದು ನಾನು ಪರಧ್ಯಾನದಲ್ಲಿರುವಾಗ ನನ್ನ ಚಿನ್ನದಂತಹ ಎತ್ತಿಗೆ ಗುಳಚುಚ್ಚಿಕೊಂಡಿತು." ಎಂದ ರೈತ.

ಆರಾತ್ರಿ ಅವರಿಬ್ಬರೂ ಒಂದು ಗ್ರಾಮವನ್ನು ಸೇರಿ ಒಂದು ಮನೆಯ ಮುಂದಿದ್ದ ಜಗಲಿಯ ಮೇಲೆ ಮಲಗಿಕೊಂಡರು. ಮಾರನೇಯ ದಿವಸ ಬೆಳಗ್ಗೆ ಎದ್ದಕೂಡಲೇ ಅವರಿಗೆ ಒಬ್ಬ ಹಾಲು ಕರೆಯುವವನು ಕಾಣಿಸಿದನು. ಅವನು ಹಾಲು ಹಿಂಡುವಾಗ ಹಸು ಅವನನ್ನು ಬಲ ವಾಗಿ ಒದೆಯಿತು. ಬಲವಾದ ಪೆಟ್ಟುಬಿದ್ದು ಅವನು ಹಿಂದಕ್ಕೆ ಉರುಳಿಬಿದ್ದನು.

"ಪಾಂಚಾಲರಾಜನಿಗೂ ಸಹ ಇದೇ ರೀತಿ ಯುದ್ಧದಲ್ಲಿ ಖಡ್ಗದೇಟು ತಗುಲಿದರೆ ಸೊಗು



ಸಾಗಿರುತ್ತದೆ" ಎಂದ. "ಎಲಾ ಅಣ್ಣಾ, ನಿನ್ನ ಹಸು ಹಾಲು ಕೊಡದೆ ಒದ್ದರೆ ಅದು ರಾಜನ ತಪ್ಪೆ?" ಎಂದು ಕೇಳಿದ ಪುರೋಹಿತ.

"ಅಲ್ಲವೇ ಮತ್ತೆ. ಪಾಲಕರು ದುರ್ಮಾರ್ಗರಾದರೆ ಪ್ರಜೆಗಳ ಪಾಡೇನಾಗಬೇಕು? ಹಾಲೀಯುವ ಹಸುಗಳನ್ನೆಲ್ಲಾ ಹಾಲು ಕರೆಯುವವರೇ ಅಟ್ಟಿಕೊಂಡುಹೋದರು. ಎಂದೂ ಕರೆಯದಿರುವ ಹಸುವಿನ ಬಳಿಗೆ ಹೋದರೆ ಅದು ಒದೆಯದೇನು ಮಾಡುತ್ತೆ?" ಎಂದ ಆತ.

ಅಲ್ಲಿಂದ ಹೊರಟು ಅವರು ರಾಜಧಾನಿಯ ದಾರಿ ಹಿಡಿದರು. ದಾರಿಯಲ್ಲಿ ಅವರೊಂದು ದೃಶ್ಯ ನೋಡಿದರು. ಒಂದು ಕೊಳದಲ್ಲಿದ್ದ ಜೀವಂತ ಕಪ್ಪೆಗಳನ್ನು ಕಾಗೆಗಳು ತಮ್ಮ ಕೊಕ್ಕಿನಿಂದ ಚುಚ್ಚಿ ತಿನ್ನುತ್ತಿದ್ದುವು.

ಆ ಕಪ್ಪೆಗಳಲ್ಲಿ ಒಂದು ಸಿಟ್ಟಾಗಿ "ಈ ಕಾಗೆ ನಮ್ಮನ್ನು ಕಿತ್ತು ತಿನ್ನುತ್ತಿರುವಂತೆ ಪಾಂಚಾಲರಾಜ ಮತ್ತು ಆತನ ಸಂತತಿಯನ್ನು ಶತ್ರುಗಳು ಚಿತ್ರವಧೆಮಾಡಲಿ" ಎಂದಿತು. "ಎಲೈ ಮತಿಗೇಡಿ ಕಪ್ಪೆಯೇ, ನಿನ್ನನ್ನು ಕಿತ್ತು ತಿನ್ನುತ್ತಿರುವ ಕಾಗೆಗಳನ್ನು ಬಯ್ಯದೆ ರಾಜನನ್ನೇಕೆ ನಿಂದಿಸುವೆ?" ಎಂದು ಪುರೋಹಿತನು ಕಪ್ಪೆಯನ್ನು ಕೇಳಿದನು.

ಅದಕ್ಕೆ ಕಪ್ಪೆ "ರಾಜನ ಅನುಗ್ರಹಪಡೆಯಲು ರಾಜಪುರೋಹಿತನು ಈ ರೀತಿ ಕೇಳುವುದರಲ್ಲಿ ಅಚ್ಚರಿಯೇನಿಲ್ಲ. ಆದರೆ ದೇಶದಲ್ಲಿ ಕಾಗೆಗಳಿಗೆ ತಿಂಡಿ ಹಾಕುವವರು ವಿರಳವಾದುದರಿಂದಲೇ ಅಲ್ಲವೇ ಕಾಗೆಗಳು ಜೀವಂತವಾಗಿರುವ ಕಪ್ಪೆಗಳನ್ನು ತಿನ್ನುವ ಸ್ಥಿತಿ ಬಂತು. ಅಂಥ ದೇಶವನ್ನು ಪಾಲಿಸುವ ರಾಜನು ಸತ್ತರೆ ದೇಶಕ್ಕೆ ತುಂಬಾ ಮೇಲ್ಮೆಯುಂಟಾದೀತು."

ಅದನ್ನು ಕೇಳಿ ರಾಜನು "ಕಪ್ಪೆಗಳೂ ಸಹ ನನ್ನನ್ನು ಶಪಿಸುತ್ತಿವೆ. ಇನ್ನು ಲಾಭವಿಲ್ಲ. ನಗರಕ್ಕೆ ಹಿಂತಿರುಗಿ ಅರಾಜಕತೆಯನ್ನು ನಿರ್ಮೂಲಮಾಡಬೇಕು" ಎಂದ.

ಅದೇ ಪ್ರಕಾರ ಆತನು ರಾಜ್ಯಪಾಲನೆಯ ವಿಷಯದಲ್ಲಿ ಮುಂದೆ ವಿಶೇಷ ಗಮನಕೊಟ್ಟು, ಎಲ್ಲಾ ಬಗೆಯ ಕುಂದು ಕೊರತೆಗಳನ್ನು ಸರಿಪಡಿಸಿ, ಪ್ರಜೆಗಳಿಗೆ ಶಾಂತಿಸೌಖ್ಯಗಳು ಲಭಿಸುವಂತೆ ರಾಜ್ಯಭಾರಮಾಡುತ್ತಿದ್ದನು.






## 11

[ಪಿಂಗಳನು ತನ್ನ ತಾಯಿಯಿಂದ ಯಥಾರ್ಥ ವಿಷಯವನ್ನು ತಿಳಿದುಕೊಂಡನು. ತನ್ನ ಅಣ್ಣಂದಿರು ಆಕೆಗೆ ಕೊಟ್ಟ ಹಿಂಸೆ ಅರಿತನು. ಆದರೆ ಈಗ ಅವರು ಜೋಲು ಮುಖ ಹಾಕಿಕೊಂಡು ಬರಲು ಅವರನ್ನು ಪ್ರೇಮದಿಂದ ಸ್ವಾಗತಿಸಿದನು. ಅವರಿಬ್ಬರು ಪಿಂಗಳನು ತಂದ ಆಸ್ತಿಗಾಗಿ ಆತನನ್ನು ಒಬ್ಬ ಸೆರಂಗನಿಗೆ ಮಾರಲು ಒಳಸಂಚು ಮಾಡಿದರು.]

**ಜೀ**ವದತ್ತನು ತನ್ನ ತಮ್ಮನವಿಷಯ ಹೇಳಿದುದನ್ನು ಕೇಳಿ ಸರಂಗು ತನ್ನ ಕೈಗಳನ್ನು ಮೇಲಕ್ಕೆಹಾರಿಸಿ ಗಹಗಹಿಸಿ ನಕ್ಕನು. ಅಲಕ್ಷ್ಯವೂ ಭಯಂಕರವೂ ಆದ ಆ ನಗುವಿನ ಅಂತರಾರ್ಥ ತಿಳಿಯದೆ ಜೀವದತ್ತ ಲಕ್ಷದತ್ತರು ಒಬ್ಬೊಬ್ಬರ ಮುಖವನ್ನೊಬ್ಬರು ಪಿಳಿಪಿಳಿಸಿಕೊಂಡು ನೋಡಿಕೊಂಡರು.

ಸರಂಗ ಕೊಂಚಹೊತ್ತು ಆಲೋಚಿಸಿ, ಜೀವದತ್ತನನ್ನು ಕುರಿತು "ನೀನು ಹೇಳಿದುದೆಲ್ಲಾ ನಿಜವೇ? ನಿಮ್ಮ ತಮ್ಮ ನಿಮಗೆ ಮತ್ತು ನಿಮ್ಮ ತಾಯಿಗೆ ನಿಷ್ಕಾರಣವಾಗಿ ಹಿಂಸೆ ಕೊಡುತ್ತಿರುವನೇ? ಅಥವಾ ಬೇರೇನಾದರೂ ಕಾರಣ ವಿದೆಯೆ? ನನ್ನೊಂದಿಗೆ ಸುಳ್ಳಾಡಬೇಡಿ" ಎಂದ ಗಂಭೀರವಾಗಿ.

"ನಮ್ಮ ಅಣ್ಣ ಹೇಳಿದುದೆಲ್ಲ ಸತ್ಯ. ಅದರಲ್ಲಿ ಸಂಶಯವಿಲ್ಲ. ಆ ದುರುಳನು ಕೊಡುತ್ತಿದ್ದ ತೊಂದರೆಗಳನ್ನು ಇಷ್ಟು ದಿನ ಹೇಗೆ ಸಹಿಸಿಕೊಂಡಿದ್ದೆವೋ ದೇವರೇ ಬಲ್ಲ. ಅವನನ್ನಿಟ್ಟುಕೊಂಡು ಬದುಕಿರಲು ನಮಗೆ ಇನ್ನು ಸಾಧ್ಯವೇ ಇಲ್ಲ." ಎಂದ ಲಕ್ಷದತ್ತ.

ಹಡಗಿನ ಸರಂಗ್ ಆ ಸಹೋದರರನ್ನು ನೆಟ್ಟದೃಷ್ಟಿಯಿಂದ ನೋಡಿ ತಲೆಯಾಡಿಸಿ



"ಹಾಗಿದ್ದ ಪಕ್ಷಕ್ಕೆ ನಿಮ್ಮ ತಮ್ಮನನ್ನು ಕೊಂಡುಕೊಳ್ಳಲು ನನ್ನ ಅಭ್ಯಂತರವಿಲ್ಲ. ಅವನನ್ನು ಎರಡು ಮೂರು ವರ್ಷಗಳ ಕಾಲ ನಮ್ಮ ಹಡಗಿನಲ್ಲಿ ಕಲಾಸಿಯಾಗಿ ಕೆಲಸ ಮಾಡಿಸಿ ಕೊಳ್ಳುತ್ತೇನೆ. ಅವನು ಸರಿಯಾದ ಒಂದುದಾರಿಗೆ ಬಂದನಂತರ ನಿಮ್ಮ ಮನೆಗೆ ಕಳುಹಿಸುತ್ತೇನೆ" ಎಂದ.

ಜೀವದತ್ತನು ಬೆಚ್ಚಿಬಿದ್ದು "ಸರಂಗ್, ನಿಮಗೆ ಪುಣ್ಯಬರುತ್ತೆ. ಆ ಕೆಲಸಮಾತ್ರ ಮಾಡಬೇಡಿ. ಮೊದಲೇ ಅವನು ದುಷ್ಟ. ಅವನನ್ನು ಎರಡು ಮೂರು ವರ್ಷಗಳನಂತರ ಮನೆಗೆ ಕಳುಹಿಸಿದರೆ ನಮ್ಮನ್ನು ಜೀವಸಹಿತ ಬಿಡಲಾರ. ಅವನೊಂದು ವಿಷಸರ್ಪ. ಸರ್ಪದೊಂದಿಗೆ ಸರಸವಾಡಬಾರದು. ದಯಮಾಡಿ



ಹಾಗೆ ಮಾಡಬೇಡಿ" ಎಂದ. "ಅದು ಸರಿ. ಆದರೆ ಅವನನ್ನು ನನಗೆ ಮಾರಲು ನಿಮ್ಮ ತಾಯಿಯ ಒಪ್ಪಿಗೆಯಿದೆಯೇ? ನಂತರ ದೊರೆಗಳ ಬಳಿ ನನ್ನಮೇಲೆ ದೂರುಕೊಟ್ಟರೆ ಲಾಭವಿಲ್ಲ. ಮಾತ್ರವಲ್ಲ, ನನಗೆ ತುಂಬಾ ಕಷ್ಟನಷ್ಟ ವುಂಟಾದೀತು, ಆಲೋಚಿಸಿ ಹೇಳಿ" ಎಂದ ಸರಂಗ್.

ಆ ಸಹೋದರರಿಬ್ಬರೂ ತಮ್ಮ ತಮ್ಮಲ್ಲಿ ಏನೋ ಮಾತನಾಡಿಕೊಂಡು ಸರಂಗನೊಂದಿಗೆ ಈರೀತಿ ಹೇಳಿದರು.

"ಅಯ್ಯಾ ನಮ್ಮ ತಾಯಿಯೊಂದಿಗೆ ಎಲ್ಲ ವಿಷಯಗಳನ್ನು ಚರ್ಚಿಸಿ ಬಂದಿದ್ದೇವೆ. ಅವನನ್ನು ಎಲ್ಲಿಗಾದರೂ ಕಳುಹಿಸಿಬಿಡಬೇಕೆಂದೇ ಆಕೆಯ ಉದ್ದೇಶ. ಒಂಬತ್ತು ತಿಂಗಳು ಹೊತ್ತು ಹೆತ್ತಮಗನಾದರೂ ಅವನ ತುಂಟತನವನ್ನು ಸಹಿಸುವ ತಾಳ್ಮೆ ಆಕೆಗಿಲ್ಲ. ಆದರೂ ಆ ಮಾತನ್ನು ತಮ್ಮೊಂದಿಗೆ ಬಾಯಿಬಿಟ್ಟು ಹೇಳಲು ಆಕೆ ಸಂಕೋಚಪಡುತ್ತಾಳೆ. ಎಷ್ಟಾದರೂ ಹಡೆದ ಮಗನಲ್ಲವೆ? ಅಂತಲೇ ನಾವಿಬ್ಬರೂ ಬಂದೆವು."

"ಹಾಗಾದರೆ ಸರಿ. ಅವನನ್ನು ಇಂದು ಸಾಯಂಕಾಲ ಇಲ್ಲಿಗೆ ಕರೆದುಕೊಂಡು ಬನ್ನಿ. ಮುಂದಿನದನ್ನು ನಾನು ನೋಡಿಕೊಳ್ಳುತ್ತೇನೆ. ಇದೋ ತೆಗೆದುಕೊಳ್ಳಿ ಅವನ ಬೆಲೆಯಾದ ನೂರು ಮೊಹರುಗಳು" ಎಂದು ಸರಂಗ್ ಚೀಲದಿಂದ ಹಣವನ್ನು ತೆಗೆದು ಜೀವದತ್ತನಿಗೆ ಕೊಡಲು ಹೋದನು-





ಜೀವದತ್ತನು ಆ ಹಣವನ್ನು ಮುಟ್ಟಲಿಲ್ಲ. "ಅಯ್ಯಾ ನಾವು ಅವನನ್ನು ಇಲ್ಲಿಯವರೆಗೆ ತರುವುದು ಸಾಧ್ಯವಾಗುವ ಕೆಲಸವಲ್ಲ. ಅವನು ಯುಕ್ತಿಯಲ್ಲಿ ನೂರಾರು ನರಿಗಳನ್ನೂ ಮೀರಿಸುವನು. ಎಂಬತ್ತು ಕೋಣಗಳಷ್ಟು ಬಲಶಾಲಿ. ಆದುದರಿಂದ ತಾವೇ ಇಂದು ನಮಗಾಗಿ ಸ್ವಲ್ಪದಯಮಾಡಿ ನಮ್ಮ ಮನೆಗೆ ಬಂದು ಯಾವುದಾದರೂ ಯುಕ್ತಿಯಿಂದ ಆ ಮೊರಡನನ್ನು ಹಿಡಿದು ಕರೆದುಕೊಂಡು ಹೋಗಬೇಕು" ಎಂದ.

ಜೀವದತ್ತನ ಭೀತಿಯನ್ನು ಕಂಡು ಸರಂಗ್ ಪಕಪಕನೆ ನಕ್ಕನು. "ಎಷ್ಟೇ ಬಲ ಶಾಲಿಯಿರಲಿ, ಯುಕ್ತಿವಂತನಿರಲಿ ಅವನ ಬೇಳೆ ನಮ್ಮಮುಂದೆ ಬೇಯುವುದಿಲ್ಲ. ಕಡೆಗೆ ರಾಕ್ಷಸನಾದರೂ ಕಣ್ಣಿಗೆ ಕಾಣಿಸಿ, ಕೈಗೆ ಸಿಕ್ಕಿದರೆ, ಕಬ್ಬಿಣದ ಸರಪಳಿಗಳಿಂದ ಕೈ ಕಾಲುಬಿಗಿದು ನಮ್ಮ ನೌಕೆಯಲ್ಲಿ ಕಲಾಸಿಯ ಕೆಲಸ ಮಾಡಿಸುವೆನು. ಈ ಸಣ್ಣವಿಷಯ ಕ್ಕಾಗಿ ಇಷ್ಟೇನೂ ಹೆದರಬೇಕಾಗಿಲ್ಲ. ಇಂದು ರಾತ್ರಿ ಮತ್ತಿಬ್ಬರು ಕಲಾಸಿಗಳನ್ನು ಸಂಗಡ ಕರೆದು ಕೊಂಡು ನಿಮ್ಮ ಮನೆಗೆ ಬರುತ್ತೇನೆ. ನೀವು ಸಿದ್ಧರಾಗಿರಿ" ಎಂದ.

"ಸಾವಿರ ನಮಸ್ಕಾರ ಸ್ವಾಮಿ. ನಿಮ್ಮ ಸಹಾಯಕ್ಕೆ ನಾವು ಕೃತಜ್ಞರಾಗಿದ್ದೇವೆ." ಎಂದರು ಆ ಸಹೋದರರು. ಅನಂತರ ಜೀವ ದತ್ತ ಲಕ್ಷದತ್ತರು ಸರಂಗ್ ಕೊಟ್ಟ ನೂರು ಮೊಹರುಗಳನ್ನು ಸ್ವೀಕರಿಸಿ, ಆತನಿಗೆ ತಮ್ಮ ಮನೆಯಗುರುತು ಹೇಳಿ, ಸಂತೋಷದಿಂದ ಮನೆಯಕಡೆ ಹೊರಟರು.

"ಈಗ ನಾವು ಪಿಂಗಳನಿಗೆ ಅನುಮಾನ ವುಂಟಾಗದಂತೆ ಏನಾದರೂ ಉಪಾಯ ಹೂಡಬೇಕು. ಸರಂಗ್ ಕಲಾಸಿಗಳೊಂದಿಗೆ ನಮ್ಮ ಮನೆಗೆ ಬರುವುದು, ಅವನಿಗೇನಾದರೂ ಕೆಟ್ಟ ಅನುಮಾನಕ್ಕೆಡೆ ಕೊಡಬಹುದಲ್ಲವೆ?" ಎಂದ ಲಕ್ಷದತ್ತ.

"ಆವಿಷಯವಾಗಿ ನೀನೇನೂ ಭಯಪಡ ಬೇಕಾಗಿಲ್ಲ. ಆಗಲೇ ನಾನೊಂದು ಉಪಾಯ ಯೋಚಿಸಿದ್ದೇನೆ" ಎಂದು ಹೇಳಿ ಜೀವದತ್ತನು ಒಂದುಸಾರಿ ಸುತ್ತಲೂ ನೋಡಿ ಲಕ್ಷದತ್ತನ ಕಿವಿಯಲ್ಲಿ ರಹಸ್ಯವಾಗಿ ಏನನ್ನೋ ಹೇಳಿದ. ಲಕ್ಷದತ್ತನು ಗಟ್ಟಿಯಾಗಿ ನಗುತ್ತಾ ಚಪ್ಪಾಳೆ



ತಟ್ಟುತ್ತಾ "ಅಣ್ಣಾ, ನೀನು ಬುದ್ಧಿಯಲ್ಲಿ ಬೃಹಸ್ಪತಿಯನ್ನೂ ಮೀರಿಸಿರುವೆಯೆಂದು ನನಗೆಗೊತ್ತು. ಆದರೂ ಹಣದ ವಿಷಯ ಹೀಗೇ ಎಂದು ಹೇಳುವುದು ಕಷ್ಟ. ಪಿಂಗಳನ ಹಣ ವಶವಾದಕೂಡಲೇ ನನಗೆ ಮೋಸಮಾಡುವುದಿಲ್ಲವಷ್ಟೆ?" ಎಂದ.

"ಚೆ, ಚೆ, ಎಲ್ಲಾದರೂ ಉಂಟೆ? ಒಡಹುಟ್ಟಿದ ಸಹೋದರನಿಗೆ ಮೋಸಮಾಡುವುದೇ? ನಮ್ಮ ವಂಶದಲ್ಲಿ ಯಾರಿಗೂ ಈವರೆಗೂ ಅಂತಹ ಹೊಲಸು ಕಾರ್ಯದ ಸೋಲ್ಲೆ ಇಲ್ಲ" ಎಂದ ಜೀವದತ್ತ.

ಅಣ್ಣತಮ್ಮಂದಿರಿಬ್ಬರೂ ನಗುತ್ತಾ, ಹರಟೆ ಕೊಚ್ಚುತ್ತಾ ಮನೆಯನ್ನು ಸಮೀಪಿಸಿದರು. ಬಾಗಿಲಬಳಿ ಪಿಂಗಳನು ಕಾಣಿಸಿದಕೂಡಲೇ, ತಮ್ಮ ಮುಖಚರ್ಯೆಯನ್ನು ಬದಲಾಯಿಸಿಕೊಂಡು, ಪೆಚ್ಚು ಮೋರೆಹಾಕಿಕೊಂಡು ಅವನ ಬಳಿಗೆ ಬಂದರು. ಪಿಂಗಳನು ಅವರನ್ನು ಕಂಡು "ಅಣ್ಣಂದಿರೇ, ಏನೋ ವ್ಯಾಕುಲ ಗೊಂಡವರಂತೆ ತೋರುತ್ತದೆ. ಏನು ನಡೆಯಿತು?" ಎಂದು ದುಗುಡದಿಂದ ಕೇಳಿದ.

ಜೀವದತ್ತನು ಕೊರಗುವ ಕಂಠದಲ್ಲಿ "ಏನಿಲ್ಲ ತಮ್ಮಾ. ಇಂದು ರಸ್ತೆಯಲ್ಲಿ ಬರುತ್ತಿರಲು ನಮ್ಮ ಹಳೇ ಸ್ನೇಹಿತ ಒಬ್ಬ ಸರಂಗು ಕಾಣಿಸಿದ. ಆತನು ಈ ನಗರಕ್ಕೆ ಯಾವುದೋ ಒಂದು ಕಾರ್ಯಾರ್ಥವಾಗಿ ಬಂದಿರುವನಂತೆ. ಹಿಂದೆ ಆತನು ನಮ್ಮಿಬ್ಬರಿಗೆ ಅನೇಕಸಲ ತನ್ನ ಶಿಬಿರದಲ್ಲಿ ಆತಿಥ್ಯ ಕೊಟ್ಟು ಸತ್ಕರಿಸಿರುವನು. ಆದರೆ ನಾವು ಆತನನ್ನು ಒಂದುಸಾರಿ



ಯಾದರೂ ಊಟಕ್ಕೆ ಕರೆಯುವ ಸ್ಥಿತಿಯಲ್ಲಿಲ್ಲ. ನಾವು ಹುಟ್ಟುದರಿದ್ರರು. ನಮ್ಮಿಂದ ಏನಾದೀತು?" ಎಂದ.

"ಅಣ್ಣಾ, ನಿಮ್ಮ ಸ್ನೇಹಿತರು ನನ್ನ ಸ್ನೇಹಿತರಲ್ಲವೇ? ನಾವೀಗ ದರಿದ್ರರಲ್ಲ. ಬೇಕಾದರೆ ಅವಂತಿನಗರದಲ್ಲಿರುವ ಸಕಲರಿಗೂ ದಿನಾ ಸಂತರ್ಪಣೆ ಏರ್ಪಡಿಸಲು ಬಲ್ಲೆವು. ನಿಮ್ಮ ಸ್ನೇಹಿತ ಸರಂಗನನ್ನು ಮತ್ತು ಆತನ ಸಂಗಡಿಗರನ್ನು ಇಂದು ರಾತ್ರಿ ನಮ್ಮ ಮನೆಗೆ ಭೋಜನಕ್ಕೆ ಆಹ್ವಾನಿಸಿ ಬೇಕಾದ ಹಾಗೆ ಮರ್ಯಾದೆ ಮಾಡೋಣ." ಎಂದು ಪಿಂಗಳನು ಹೇಳಿದನು.

"ನಿಜವೇ, ನೀನು ಹೇಳುತ್ತಿರುವುದು ನಿಜವೇ" ಎಂದು ಜೀವದತ್ತ ಲಕ್ಷದತ್ತರು ಆನಂದ ಮತ್ತು ಆಶ್ಚರ್ಯ ಗೊಂಡವರಂತೆ ನಟಿಸುತ್ತ ಪಿಂಗಳನನ್ನು ಪ್ರಶ್ನಿಸಿದರು.

"ಸಂದೇಹವೇಕೆ ಸಹೋದರರೇ, ನಿಮ್ಮ ಸ್ನೇಹಿತನನ್ನು ಕರೆದುಕೊಂಡು ಬನ್ನಿ. ಭಾರಿ ಔತಣ ಏರ್ಪಡಿಸೋಣ" ಎಂದು ಅವರ ಸಂದೇಹ ನಿವಾರಿಸಿದ ಪಿಂಗಳ.

"ಸರಿ, ಈ ವಿಷಯವನ್ನು ಸ್ನೇಹಿತನಿಗೆ ಹೇಳಿಬಿಟ್ಟು ಬರುತ್ತೇವೆ" ಎಂದು ಅವರಿಬ್ಬರೂ ಪೇಟೆಯಕಡೆ ಹೊರಟರು.

ಸಂಜೆಯವರೆವಿಗೂ ಜೂಜಿನಕಟ್ಟೆಗಳಲ್ಲಿ, ಹೆಂಡದಂಗಡಿಗಳಲ್ಲಿ ಕಾಲಕಳೆದು, ಕತ್ತಲಾದ ನಂತರ ಸರಂಗನ ಬಿಡಾರಕ್ಕೆ ಹೋಗಿ "ಬನ್ನಿ ಸ್ವಾಮಿ, ಬೇಗ ಬನ್ನಿ" ಎಂದರು. ಅವರ ಆಹ್ವಾನದಿಂದ ಸರಂಗ ಸಂತೋಷಗೊಂಡನು.




ಅವನು ಬಲಶಾಲಿಗಳಾದ ಇಬ್ಬರು ಕಲಾಸಿಗಳನ್ನು ಸಂಗಡ ಕರೆದುಕೊಂಡು ಪಿಂಗಳನ ಮನೆಗೆ ಹೊರಟನು.

ಸರಂಗ ಮತ್ತು ಅವನ ಸಂಗಡಿಗರಿಗೆ ಪಿಂಗಳನು ಹೃತ್ಪೂರ್ವಕ ಸ್ವಾಗತ ನೀಡಿದನು. ಅವರನ್ನು ಒಂದು ಕೊಠಡಿಯಲ್ಲಿ ಕೂರಿಸಿ, ಪಿಂಗಳ ಮತ್ತು ಅವನ ತಾಯಿ ಚೀಲದಿಂದ ವಿವಿಧ ಭಕ್ಷ್ಯ ಪಾನೀಯಗಳನ್ನು ತೆಗೆದು ಅವರಿಗೆ ಬಡಿಸಿದರು. ಸರಂಗಗೆ ಚೀಲದ ವಿಷಯ ತಿಳಿಯದು. ಪಾಪ ಜೀವದತ್ತ ಲಕ್ಷದತ್ತರು ತನ್ನನ್ನು ಸತ್ಕರಿಸಲು ಈ ಎಲ್ಲ ವ್ಯವಸ್ಥೆಗಳನ್ನು ಮಾಡಿರುವರೆಂದು ಅವನು ಭಾವಿಸಿ ತುಂಬಾ ತೃಪ್ತಿಪಟ್ಟನು. ಸಂತೋಷ ಸಂಭ್ರಮಗಳಿಂದ ಅರ್ಧರಾತ್ರಿಯಾಗುವರೆವಿಗೂ ಎಲ್ಲರೂ ತಮಾಷೆಯಾಗಿ ಕಾಲವನ್ನು ಕಳೆದರು. ಪಿಂಗಳನು ನಿದ್ರೆಯಮತ್ತಿನಲ್ಲಿರುವಾಗ ಅವನಮೇಲೆ ಬಿದ್ದು ಬಂಧಿಸಿ ಹಿಡಿದುಕೊಂಡು ಹೋಗಬೇಕೆಂದು ಸರಂಗ್ ಯೋಚಿಸಿದ್ದನು. ಆದರೆ ಪಿಂಗಳನು ನಿದ್ರೆ ಹೋಗುವ ಸೂಚನೆ ಸ್ವಲ್ಪವೂ ಕಾಣಿಸಲಿಲ್ಲ. ಬಹಳ ಉತ್ಸಾಹದಿಂದ ಆಮಾತು ಈಮಾತು ಅವರೊಂದಿಗೆ ಆಡುತ್ತಿದ್ದನು. ಹೀಗೆಯೇ ರಾತ್ರಿ ಬಹಳ ಹೊತ್ತು ಕಳೆಯಿತು.

ವೃಥಾ ಹೀಗೆ ಕಾಲಕಳೆಯುವುದು ಉಚಿತವಲ್ಲವೆಂದು ಸರಂಗ್ ತನ್ನ ಅನುಚರರಿಗೂ, ಜೀವದತ್ತ ಲಕ್ಷದತ್ತರಿಗೂ ಸಂಜ್ಞೆಮಾಡಿದನು. ಕೂಡಲೇ ಎಲ್ಲರೂ ಪಿಂಗಳನಮೇಲೆ ಬಿದ್ದರು. ಇಬ್ಬರು ಟೊಣಪರು ಆತನು ಕೈಕಾಲು ಕದಲಿಸದಂತೆ ಗಟ್ಟಿಯಾಗಿ ಹಿಡಿದುಕೊಂಡರು. ಜೀವದತ್ತನು ಅವನ ಬಾಯಿಗೆ ಬಟ್ಟೆಯ ಉಂಡೆಯನ್ನು ತುರುಕಿದನು.

ಪಿಂಗಳನು ಮೊದಲು ವಿಸ್ಮಯಗೊಂಡನು. ಕೂಡಲೇ ಚೇತರಿಸಿಕೊಂಡು ಬಂಧನದಿಂದ ಬಿಡಿಸಿಕೊಳ್ಳಲು ಸೆಣಸಾಡಿದನು. ಆದರೆ ತಾನೊಬ್ಬ. ಎದುರಾಳಿಗಳು ಐವರು. ಆಗ ಅವನಿಗೆ ತನ್ನ ಸೇವಕ ಭಲ್ಲೂಕಕೇತನು ಜ್ಞಾಪಕಕ್ಕೆ ಬಂದನು. ಎಂಥಕಷ್ಟ ಪರಿಸ್ಥಿತಿಯಲ್ಲಿದ್ದರೂ ಒಂದಾನೊಂದು ಮಂತ್ರವನ್ನು ಉಚ್ಚರಿಸಿದರೆ ತಾನು ಮರುಕ್ಷಣವೇ ಪ್ರತ್ಯಕ್ಷವಾಗುವುದಾಗಿ ಹೇಳಿ, ಭಲ್ಲೂಕಕೇತನು ಪಿಂಗಳನಿಗೆ ಒಂದು ಮಂತ್ರ ಹೇಳಿಕೊಟ್ಟಿದ್ದನು.



ಆದರೆ ಪಿಂಗಳನಿಗೆ ಆ ಮಂತ್ರ ಈಗ ಜ್ಞಾಪ ಕಕ್ಕೆ ಬರದಾಯಿತು. ಅವನು ನಿಸ್ಸಹಾಯ ನಾಗಿ ಅಣ್ಣಂದಿರ ಒಳಸಂಚಿಗೆ ಗುರಿಯಾಗಿ ಸರಂಗನ ಗುಲಾಮನಾದನು.

ಪಕ್ಕದ ಕೋಣೆಯಲ್ಲಿ ಮಲಗಿದ್ದ ತಾಯಿಗೆ ಈ ವಿಷಯವೇನೂ ತಿಳಿಯದು. ಪಿಂಗಳನನ್ನು ಹಗ್ಗಗಳಿಂದ ಬಂಧಿಸಿ, ಇಬ್ಬರು ಕಲಾಸಿಗಳು ಅವನನ್ನು ಮರದದಿಮ್ಮಿಯಂತೆ ಭುಜದ ಮೇಲೆತ್ತಿಕೊಂಡು ತಮ್ಮ ಯಜಮಾನ ಸರಂಗನ ಹಿಂದೆ ನಡೆದರು. ಜೀವದತ್ತ ಲಕ್ಷದತ್ತರು ಸಹ ಅವರನ್ನು ಸಮುದ್ರತೀರದವರೆವಿಗೂ ಹಿಂಬಾಲಿಸಿದರು. ಸರಂಗನೊಂದಿಗೆ "ಅಯ್ಯಾ, ನಮ್ಮ ಹುಡುಗನನ್ನು ಎಂತಹ ಪರಿಸ್ಥಿತಿಯಲ್ಲಾದರೂ ಹೊರಗೆ ಬಿಡಬೇಡಿ. ಅವನೊಂದು ಭಯಂಕರವಾದ ವಿಷಸರ್ಪ. ಈ ವಿಚಾರವನ್ನು ನಿಮಗೆ ಮೊದಲೇ ವಿಸ್ತಾರವಾಗಿ ಹೇಳಿದ್ದೇನೆ" ಎಂದರು.

"ವಿಷಸರ್ಪದ ಬಾಯಿ ಬಿಗಿದಿರುವೆವು. ಅದರ ಹಲ್ಲು ಕಿತ್ತು ಹಾಕುವ ವಿಧಾನ ಹೇಗೆಂಬುದು ನನಗೆ ಚೆನ್ನಾಗಿ ತಿಳಿದಿದೆ. ನನ್ನ ಹಡಗಿನಲ್ಲಿ ಹುಟ್ಟು ಹಾಕುವ ಕಬ್ಬಿಣದ ಚಕ್ರಕ್ಕೆ ಅವನನ್ನು ಸರಪಳಿಯಿಂದ ಬಿಗಿಸಿದರೆ ಆ ಪರಮೇಶ್ವರನೂ ಬಂದು ಬಿಡಿಸಲಾರ" ಎಂದ ಸರಂಗ್ ಹೆಮ್ಮೆಯಿಂದ.

ಜೀವದತ್ತ ಲಕ್ಷದತ್ತರು ಸರಂಗಗೆ ಮತ್ತೊಂದುಬಾರಿ ತಮ್ಮ ಕೃತಜ್ಞತೆಯನ್ನು ತಿಳಿಸಿ ಮನೆಗೆ ಹಿಂತಿರುಗಿದರು. ಅವರು ಮನೆಗೆ




ಬಂದಾಗ ಇನ್ನೂ ಕತ್ತಲಿತ್ತು. ಹಾಸಿಗೆಯ ಮೇಲೆ ಬಿದ್ದುಕೊಂಡು ನಿದ್ರಹೋದವರಂತೆ ನಟಿಸಿ, ಬೆಳಗಾದಕೂಡಲೇ ತಾಯಿಯ ಬಳಿಗೆ ಬಂದು "ಅಮ್ಮಾ ಪಿಂಗಳನೆಲ್ಲಿ?" ಎಂದು ಕಾತುರತೆಯಿಂದ ಕೇಳಿದರು.

ತಾಯಿ ಅವರಕಡೆ ಬೆರಗುಗಣ್ಣುಗಳಿಂದ ನೋಡುತ್ತಾ "ಏನು, ಮನೆಯಲ್ಲಿಲ್ಲವೇ? ಅದೇಕೆ ಅಷ್ಟು ಗಾಬರಿಯಾಗಿರುವಿರಿ? ಅವನ ಕೋಣೆಯಲ್ಲೆ ನಿದ್ರಿಸುತ್ತಿರಬಹುದು. ಹೋಗಿ ನೋಡಿ" ಎಂದಳು.

"ಅವನು ಅಲ್ಲಿಲ್ಲ. ಮನೆಯಲ್ಲಿ ಮತ್ತೆಲ್ಲೂ ಇರುವಂತೆ ಕಾಣಿಸದು" ಎಂದ ಜೀವದತ್ತ.

ಆ ಮಾತು ಕೇಳಿ ಮುದುಕಿ ಹೆದರಿದಳು. ಆಕೆ ತಟಕ್ಕನೆ ಹಾಸಿಗೆಯಿಂದೆದ್ದು ಮನೆಯ



ಲೆಲ್ಲಾ ಹುಡುಕಿದಳು. ಆಕೆಯ ಉದ್ವೇಗವನ್ನು ಗಮನಿಸಿದ ಜೀವದತ್ತನು "ಅಮ್ಮಾ, ನನಗೇನೋ ಒಂದು ಸಂದೇಹ ಬಂದಿದೆ. ಪಿಂಗಳನು ರಾತ್ರಿ ನಮ್ಮ ಮನೆಗೆ ಬಂದ ಹಡಗಿನ ಸರಂಗನಾದ ಅತಿಥಿಯೊಂದಿಗೆ ಸಮುದ್ರ ಪ್ರಯಾಣಮಾಡಲು ಹೊರಟಿರುವಂತೆ ನನಗೆ ತೋರುತ್ತಿದೆ." ಎಂದ.

"ಇರಬಹುದು. ಯಾವುದೋ ದ್ವೀಪದಲ್ಲಿ ಭಾರಿ ನಿಧಿ ಯಿರುವುದೆಂದು ಪಿಂಗಳನೊಂದಿಗೆ ಸರಂಗ ಹೇಳುತ್ತಿದ್ದ. ನಿಧಿಯನ್ನು ಹೊರಗೆ ತೆಗೆಯುವುದರಲ್ಲಿ ತಾನು ಸಿದ್ಧಹಸ್ತನೆಂದು ಹೇಳುತ್ತಿದ್ದ ಪಿಂಗಳ." ಎಂದ ಲಕ್ಷದತ್ತ. ಮುಗ್ಧಳಾದ ಮುದುಕಿಗೆ ಅವನ ಮಾತಿನಲ್ಲಿ ನಂಬಿಕೆ ಯುಂಟಾಯಿತು. "ಹೌದು, ಪಿಂಗಳನು ತುಂಬಾ ಅದೃಷ್ಟವಂತ. ಅವನ ನ್ಯಾಯಶೀಲತೆ, ಅವನನ್ನು ಎಲ್ಲ ಆಪತ್ತುಗಳಿಂದ ಕಾಪಾಡುವುದು. ದೇವರೇ, ನನ್ನ ಕಂದಮ್ಮ ಬೇಗನೆ ಮನೆಗೆ ಬರುವಂತೆ ಮಾಡಪ್ಪಾ" ಎಂದು ಆಕೆ ಪ್ರಾರ್ಥಿಸಿದಳು. ತಾಯಿಯ ವರ್ತನೆ ಕಂಡು ದುರುಳರಾದ ಜೀವದತ್ತ ಲಕ್ಷದತ್ತರಿಗೆ ಕೋಪ ಬಂತು. ಅವರು ತಮ್ಮ ತಾಯಿಯ ಮುಗುದತೆಗೆ ನಕ್ಕು "ಅಮ್ಮಾ, ಅವನು ಬುದ್ಧಿವಂತ, ನಾವು ತಿಳಗೇಡಿಗಳು ಅಂತ ತಾನೇ ನಿನ್ನ ಅಭಿಪ್ರಾಯ. ಮೊದಲಿನಿಂದ ನಿನಗೆ ಅವನೆಂದರೆ ತುಂಬಾ ಪ್ರೀತಿ ಎಂಬ ಸಂಗತಿ ನಮಗೆ ಗೊತ್ತು. ನಾವಿನ್ನೊಂದು ಕ್ಷಣವಾದರೂ ಈ ಮನೆಯಲ್ಲಿರಲಾರೆವು. ನಮ್ಮ ಅಪ್ಪನ ಆಸ್ತಿಯನ್ನೆಲ್ಲಾ ಹುಡುಕಿ ತೆಗೆದುಕೊಂಡು ಹೋಗಿಬಿಡುತ್ತೇವೆ." ಎಂದಳು.

ತಾಯಿ ಅವರನ್ನು ತಡೆದು "ನಿಮ್ಮಪ್ಪ ಸಂಪಾದಿಸಿದ ಆಸ್ತಿಯನ್ನೆಲ್ಲಾ ನೀವೆಂದೋ ಹಾಳುಮಾಡಿದಿರಿ. ಈಗ ಈ ಮನೆಯಲ್ಲಿರುವುವೆಲ್ಲಾ ನಮ್ಮ ಪಿಂಗಳನ ಸ್ವಯಾರ್ಜಿತ ಹೊರತು ಮತ್ತೇನಿಲ್ಲ." ಎಂದಳು.

ಜೀವದತ್ತ ಲಕ್ಷದತ್ತರು ಸಿಡಿದೆದ್ದು, ತಾಯಿಯನ್ನು ನಿಂದಿಸಿ, ಪಿಂಗಳನು ಮಾಂತ್ರಿಕ ಪದ್ಮಪಾದನಿಂದ ಪಡೆದ ಹಣ, ಚೀಲಗಳನ್ನು ಹುಡುಕಿ ತೆಗೆದುಕೊಂಡು ಓಡಿಹೋದರು.

[ಇನ್ನೂ ಇದೆ]





ಪರಿವಾರ ಬರುವುದನ್ನು ಕಾತುರದಿಂದ ಕಾದಿದ್ದ ವರ್ತಕರು ತಮ್ಮ ಹಣ ವಿಷಯದಲ್ಲಿ ಆತುರಪಡಲಾರಂಭಿಸಿದರು. ಅವರು ತಮ್ಮ ಭೀತಿಯನ್ನು ಆಲಿಯಬಳಿಗೆ ಹೇಳಿಕೊಂಡರು. ಯಾಕೆಂದರೆ ಆತನ ಮಾತನ್ನು ನಂಬಿ ಅವರೆಲ್ಲ ಮಾರೂಪನಿಗೆ ಸಾಲಕೊಟ್ಟಿದ್ದರು.

ಆಲಿ ಮಾರೂಪನನ್ನು ಒಂದು ಪಕ್ಕಕ್ಕೆ ಕರೆದುಕೊಂಡುಹೋಗಿ "ನಿನಗೆಲ್ಲೋ ಬುದ್ಧಿ ಕೆಟ್ಟುಹೋಗಿದೆ. ವರ್ತಕರು ಹಣಕ್ಕಾಗಿ ತೊಂದರೆಪಡಿಸುತ್ತಿದ್ದಾರೆ. ನೀನು ಅವರಿಗೆ ಅರುವತ್ತು ಸಾವಿರ ಕೊಡಬೇಕಾಗಿದೆಯಂತೆ. ಆ ಹಣದಿಂದ ಭಾರಿ ವ್ಯಾಪಾರ ಮಾಡಬಹುದಾಗಿತ್ತು. ನೀನು ಸೋಮಾರಿಯಾಗಿ ಅದನ್ನೆಲ್ಲಾ ಬಿಕ್ಷುಕರಿಗೆ ಹಂಚಿದೆ. ಆ ಸಾಲ ತೀರಿಸುವ ಬಗೆಹೇಗೆ?" ಎಂದು ನಿಷ್ಠೂರತೆಯಿಂದ ಕೇಳಿದ.

"ಏನು ಭಯವಿಲ್ಲ. ಅರುವತ್ತು ಸಾವಿರವೆಂದರೇನು ಮಹಾ. ನನ್ನ ಪರಿವಾರ ಬರಲಿ, ವರ್ತಕರಿಗೆ ಬಂಗಾರ ಬೇಕೆಂದರೆ ಬಂಗಾರ ಕೊಡುತ್ತೇನೆ; ಸರಕುಕೊಡಿ ಎಂದರೆ ಸರಕು ಕೊಟ್ಟು ಕಳುಹಿಸುತ್ತೇನೆ. ಯಾವುದು ಕೇಳಿದರೂ ನನ್ನಲ್ಲಿ ಯಥೇಚ್ಛವಾಗಿದೆ." ಎಂದು ಮಾರೂಪ್ ಗಂಭೀರವಾಗಿ ನುಡಿದ.

"ಎಲಾ ಬಕವೇ, ಆ ಕಟ್ಟುಕಥೆಯನ್ನು ನನಗೇ ಒಪ್ಪಿಸುವೆಯಾ? ನಿನ್ನ ವಿಚಾರ ಎಲ್ಲರಿಗೂ ಹೇಳಿಬಿಡುತ್ತೇನೆ ಹುಷಾರ್" ಎಂದು ಆಲಿ ಹೆದರಿಸಿದ.

"ಸಾಕು ಸುಮ್ಮನಿರು. ನಾನೊಬ್ಬ ಬಡವನೆಂದು ಭಾವಿಸಿರುವೆಯಾ? ದಾರಿಯಲ್ಲಿ ನನ್ನ ಸಂಪತ್ತೆಲ್ಲಾ ಬರುತ್ತಿದೆ. ಅದು ಬಂದಿಳಿದ ಮರುಕ್ಷಣವೇ ಈ ವರ್ತಕರ ಹಣವನ್ನೆಲಾ ಒಂದಕ್ಕೆರಡರಷ್ಟು ಕೊಡುತ್ತೇನೆ" ಎಂದ ಮಾರೂಪ್.

"ನನ್ನೊಂದಿಗೇ ಸುಳ್ಳಾಡುವೆಯಾ? ದುಷ್ಟ. ನೋಡು ನಾನು ಏನುಮಾಡುವೆನೋ?" ಎಂದು ಬೆದರಿಸಿದ ಆಲಿ. "ನೀನೇನು ಮಾಡಿದರೂ ಸರಿ. ನನ್ನ ಪರಿವಾರ ಇಲ್ಲಿಗೆ ತಲುಪುವತನಕ ಅವರೆಲ್ಲ ಕಾದಿರಬೇಕು.

ಎಸ್. ಆರ್. ರಾವು



ಹೆದರಬೇಡ" ಎಂದ ಮಾರೂಪ್. ಅಲ್ಲಿಗೆ ಆಲಿ ಬಾಯಿ ಮುಚ್ಚಿಕೊಳ್ಳಬೇಕಾಯಿತು. ಒಂದಾನೊಂದು ಕಾಲದಲ್ಲಿ ತಾನು ಮಾರೂಪ್ ಕೋಟ್ಯಾಧೀಶ್ವರನೆಂದು ಎಲ್ಲರಿಗೂ ಪರಿಚಯ ಮಾಡಿಕೊಟ್ಟು, ಅದೇ ಬಾಯಿಂದ ಈಗ ಅವನು ಆಗರ್ಭದರಿದ್ರನೆಂದು ಸರಿ ವರ್ತಕರೊಂದಿಗೆ ಹೇಗೆ ತಾನೇ ಹೇಳುವನು?

ಉಳಿದ ವರ್ತಕರೆಲ್ಲ ಆಲಿಯ ಬಳಿಗೆ ಬಂದು "ನಮ್ಮ ಬಾಕಿ ವಿಷಯವೇನು ಹೇಳುತ್ತಿದ್ದಾನೆ. ವಸೂಲಾಗುವ ಸೂಚನೆಗಳಿವೆಯೋ?" ಎಂದು ಕೇಳಿದರು.

ಆಲಿ ಅವರೊಂದಿಗೆ "ಬಾಕಿವಿಷಯವನ್ನು ಪ್ರಸ್ತಾಪಿಸಲು ನಾನು ಹಿಂತೆಗೆದೆ. ಯಾಕೆಂದರೆ ನಾನೇ ಆತನಿಗೆ ಸಾವಿರ ವರಹಗಳನ್ನು ಸಾಲ ಕೊಟ್ಟಿರುವೆನು. ನೀವು ಆತನಿಗೆ ಸಾಲ ಕೊಡುವಮೊದಲು ನನ್ನೊಂದಿಗೆ ಹೇಳಬೇಕಿತ್ತು. ನಿಮ್ಮ ಹಣಕ್ಕೆ ನಾನು ಜವಾಬ್ದಾರನಲ್ಲ. ಅದನ್ನು ನೀವೇ ವಸೂಲು ಮಾಡಿಕೊಳ್ಳಿ. ಹಾಗೆ ಸಾಧ್ಯವಿಲ್ಲದಿದ್ದರೆ ಸುಲ್ತಾನರ ಬಳಿಗೆಹೋಗಿ, ಆತನು ವಂಚಕನೆಂದು, ನಿಮ್ಮನ್ನು ಮೋಸಮಾಡಿದನೆಂದು ದೂರುಕೊಡಿ" ಎಂದ.

ವರ್ತಕರು ಸುಲ್ತಾನನಬಳಿಗೆ ಹೋಗಿ ತಮಗೂ ಮಾರೂಪ್‌ನಿಗೂ ನಡೆದ ಲೇವಾದೇವಿಯ ವಿಷಯ ಮನವಿಮಾಡಿಕೊಂಡರು. "ಪ್ರಭೂ, ಅವ್ಯಕ್ತಿ ಬಡವನೆಂದೂ ಹೇಳುವಂತಿಲ್ಲ. ಏಕೆಂದರೆ ನಮ್ಮ ಕಣ್ಣೆದುರಿನಲ್ಲೇ ಬಡಬಗ್ಗರಿಗೆ ಹಿಡಿಹಿಡಿ ಚಿನ್ನವನ್ನು ಹಂಚಿದ. ದರಿದ್ರನು ಎಂದಿಗೂ ಈರೀತಿ ಮಾಡಲಾರ. ದಾನಧರ್ಮಗಳಿಗಾಗಿ ಆತನು ನಮ್ಮಿಂದ ಅರುವತ್ತು ಸಾವಿರ ವರಹಗಳನ್ನು ಸಾಲವಾಗಿ ತೆಗೆದುಕೊಂಡಿದ್ದಾನೆ. ಆತನು ಹಣವಂತನೆಂದು ಸುಮ್ಮನಿರಲೂ ಸಾಧ್ಯವಿಲ್ಲವಾಗಿದೆ. ಏಕೆಂದರೆ ಆತನ ಪರಿವಾರ ಬರುವ ಸೂಚನೆಯೇ ಕಂಡುಬರದು," ಎಂದರು. ಅವರ ಮಾತುಗಳನ್ನು ಕೇಳಿ ಸುಲ್ತಾನನು ಮಾರೂಪ್ ಶ್ರೀಮಂತನಿರಲೇಬೇಕೆಂದು ನಂಬಿದನು.

ಸುಲ್ತಾನನು ಪರಮಲೋಭಿ. ಮಾರೂಪ್ ಬಡವರಿಗೆ ಹಿಡಿಗಟ್ಟಳೆ ಚಿನ್ನವನ್ನು ದಾನ ಮಾಡಿದನೆಂದು ಕೇಳಿ, ಆತನಿಂದ ಲಾಭ ಹೊಂದುವ ದುರಾಶೆ ಸುಲ್ತಾನನಿಗುಂಟಾ



ಯಿತು. ಅವನು ವರ್ತಕರಿಗೆ ಸಮಾಧಾನ ಹೇಳಿ ಕಳುಹಿಸಿಬಿಟ್ಟನು. ನಂತರ ತನ್ನ ವಜೀರ ವನ್ನು ಕರೆದು "ನಾವು ಈ ಮಾರೂಫನ ಸ್ನೇಹ ಸಂಪಾದಿಸಬೇಕು. ಆತನ ಸರಕು ಇಂದಿಲ್ಲದಿದ್ದರೆ ನಾಳೆಯಾದರೂ ಬರುತ್ತದೆ. ಈ ವರ್ತಕರು ಗಿಡುಗಗಳಂತೆ ಹೊಂಚು ಕಾಯುತ್ತಿದ್ದಾರೆ. ಅವರು ಆತನ ಸರಕು ಗಳನ್ನು ಲೂಟಿಮಾಡುವಮೊದಲು ನಾವು ಜಾಗ್ರತೆ ವಹಿಸಬೇಕು. ಅಗತ್ಯಬಿದ್ದರೆ ಆತನಿಗೆ ನಮ್ಮ ಮಗಳನ್ನು ಕೊಟ್ಟು ಮದುವೆ ಮಾಡಲೂ ನಾನು ಸಿದ್ಧನಿದ್ದೇನೆ" ಎಂದ ಸುಲ್ತಾನ. "ನೀವು ದರಾಸೆಗೊಳಗಾಗಿ ಮೋಸ ಹೋಗದಿರಿ. ಈ ಮನುಷ್ಯ ಛಾರಿವಂಚಕನಂತೆ ತೋರುವನು" ಎಂದ ವಜೀರ.

"ನಾನು ಮುಂಚೆ ಆತನನ್ನು ಪರೀಕ್ಷೆ ಮಾಡುವೆನು. ಅದಕ್ಕೊಂದು ಉಪಾಯ ಹುಡುಕಿದ್ದೇನೆ. ಆತನು ಮೋಸಗಾರನೆಂದು ರುಜುವಾತಾದರೆ ತಲೆ ತೆಗೆಯಿಸುವ" ಎಂದ ಸುಲ್ತಾನ. ಕೂಡಲೇ ವಜೀರನು ಮಾರೂಫ್‌ನಿಗೆ ಹೇಳಿ ಕಳುಹಿಸಿದ. ಮಾರೂಫ್ ಬಂದು ಸುಲ್ತಾನನಿಗೆ ವಿನಯದಿಂದ ಸಲಾಮುಮಾಡಿ ಒಂದುಕಡೆ ಕುಳಿತುಕೊಂಡ.

"ನೀನು ಈ ನಗರದ ವ್ಯಾಪಾರಿಗಳಿಗೆ ಸಾವಿರಾರು ದೀನಾರಗಳನ್ನು ಬಾಕಿ ಕೊಡ ಬೇಕಂತೆ ನಿಜವೇ?" ಎಂದು ಸುಲ್ತಾನನು ಕೇಳಿದ. ಮಾರೂಫ್ ಹೌದೆಂದು ಒಪ್ಪಿ ಕೊಂಡ. "ಹಾಗಾದರೆ ಏಕೆ ಅವರ ಸಾಲ



ವನ್ನು ಹಿಂತಿರುಗಿ ಕೊಟ್ಟುಬಿಡಬಾರದು?" ಎಂದು ಸುಲ್ತಾನನು ಮತ್ತೆ ಪ್ರಶ್ನೆಮಾಡಿದ. "ನನ್ನ ಪರಿವಾರ ಬಂದಿಳಿದಕೂಡಲೇ ಅವರ ಬಾಕಿ ತೀರಿಸುತ್ತೇನೆ. ಚಿನ್ನ ಬೇಕೆಂದವರಿಗೆ ಚಿನ್ನ ಕೊಡುತ್ತೇನೆ. ಸರಕು ಬೇಕೆಂದರೆ ಸರಕು ಕೊಡುತ್ತೇನೆ. ಯಾರುಯಾವುದು ಕೋರಿದರೂ ನಾನು ಕೊಡಲು ಸಿದ್ಧನಿದ್ದೇನೆ. ನನ್ನಲ್ಲಿ ಎಲ್ಲವೂ ಯಥೇಚ್ಛವಾಗಿವೆ" ಎಂದ ಮಾರೂಫ್.

ಅವನನ್ನು ಪರೀಕ್ಷಿಸಲು ಸುಲ್ತಾನನು ಸಾವಿರ ದೀನಾರ ಬೆಲೆಬಾಳುವ ಮುತ್ತನ್ನು ಅವನಿಗೆ ಕೊಟ್ಟು "ಇಷ್ಟು ಬೆಲೆಬಾಳುವ ಮತ್ತು ಉತ್ತಮವಾದ ಮುತ್ತುಗಳು ನಿನ್ನ ಪರಿವಾರದಲ್ಲಿರುವುದೇ?" ಎಂದು ಕೇಳಿದ.

ಮಾರೂಪ್ ಅದನ್ನು ಒಮ್ಮೆ ಅತ್ತಿತ್ತತಿರುಗಿಸಿ ನೋಡಿ ಕಾಲ್ಕೆಳಗೆ ಹಾಕಿ ತುಳಿದುಬಿಟ್ಟನು.

ಸುಲ್ತಾನು ರೊಚ್ಚಿಗೆದ್ದನು. "ಧೂರ್ತ, ಏನು ನಿನ್ನ ಅಹಂಕಾರ?" ಎಂದು ಗದರಿಸಿದ.

"ಈ ಮುತ್ತು ಸಾವಿರ ದೀನಾರಗಳಿಗಿಂತ ಹೆಚ್ಚು ಬೆಲೆಬಾಳುವುದಿಲ್ಲ. ನನ್ನಬಳಿ ಇದಕ್ಕಿಂತಲೂ ದೊಡ್ಡದೊಡ್ಡ ಮುತ್ತುಗಳಿವೆ" ಎಂದ ಮಾರೂಪ್. ಸುಲ್ತಾನನ ದುರಾಸೆ ತೀವ್ರವಾಯಿತು. ಆತನು ಕೂಡಲೇ ವರ್ತಕರನ್ನೆಲ್ಲಾ ಕರೆಯಿಸಿ "ನೀವು ಏನೂ ಚಿಂತಿಸಬೇಕಾಗಿಲ್ಲ. ಇವನ ಪರಿವಾರ ತಪ್ಪದೆ ಬರುತ್ತದೆ. ಆಗ ನಿಮ್ಮ ಬಾಕಿ ವಸೂಲು ಮಾಡಿಕೊಳ್ಳಬಹುದು" ಎಂದ. ತರುವಾಯ ಆತನು ತನ್ನ ವಜೀರನನ್ನು ಒಂದು ಪಕ್ಕಕ್ಕೆ ಕರೆದು ಗುಟ್ಟಾಗಿ "ಮಾರೂಪ್‌ನನ್ನು ರಾಜಭವನಕ್ಕೆ ಆಹ್ವಾನಿಸಿ, ಆತನೊಂದಿಗೆ ನನ್ನ ಮಗಳ ವಿಷಯ ಪ್ರಸ್ತಾಪಿಸಿ, ಆಕೆಯನ್ನು ಮದುವೆಯಾಗಲು ಸಮ್ಮತಿಸುವನೇನೋ ತಿಳಿದು ನನಗೆ ಹೇಳಿರಿ. ಒಪ್ಪಿಕೊಂಡರೆ ಆತನ ಆಸ್ತಿಯನ್ನೆಲ್ಲಾ ನಾವೇ ವಶಪಡಿಸಿ ಕೊಳ್ಳಬಹುದು" ಎಂದ.

"ಪ್ರಭೂ, ಈ ಪರದೇಶದವನನ್ನು ನೋಡಿದರೆ ನನಗೇಕೋ ಸಂಶಯವಾಗುತ್ತದೆ. ಆತನನ್ನು ರಾಜಭವನಕ್ಕೆ ಆಹ್ವಾನಿಸುವುದೇ ಸರಿ ಕಾಣದು. ಈಗಲೇ ಅವಸರವೇನು ಬಂತು. ಆತನ ಪರಿವಾರದ ಸುಳಿವಾದರೂ ಕಾಣಿಸದು" ಎಂದು ಸಲಹೆ ನೀಡಿದನು. ವಜೀರನ ಮಾತು ಕೇಳಿ ಸುಲ್ತಾನನು ಬಹಳ



ಕೋಪದಿಂದ "ವಿಶ್ವಾಸ ಘಾತುಕನೇ, ನೀನು ನನ್ನ ಮಗಳನ್ನು ವಿವಾಹವಾಗುವ ಅಪೇಕ್ಷೆ ತೋರಿದಾಗ ನಾನು ನಿರಾಕರಿಸಿದೆ. ಈಗ ಉತ್ತಮ ಸಂಬಂಧ ಸಿಕ್ಕಿತೆಂದು ಅದನ್ನು ಹಾಳುಮಾಡಲು ಪ್ರಯತ್ನಿಸುತ್ತಿರುವೆ. ನನ್ನ ಮಗಳಿಗೆ ಮದುವೆಯ ವಯಸ್ಸು ಮೀರಿದ ನಂತರ ನೀನೇ ಆಕೆಯನ್ನು ವಿವಾಹವಾಗಬಹುದೆಂದು ಯೋಚಿಸುತ್ತಿರಬಹುದು. ಈ ವರ್ತಕ ಶ್ರೇಷ್ಠನು ನನ್ನ ಮಗಳನ್ನು ಮದುವೆಯಾದರೆ ನಾವೆಲ್ಲರೂ ಸುಖಪಡುವೆವು. ನಿನಗೇನು ಗೊತ್ತು" ಎಂದು ಸುಲ್ತಾನನು ವಜೀರನನ್ನು ಮೂದಲಿಸಿದನು.

ಪ್ರತಿ ಹೇಳಿದರೆ ಸುಲ್ತಾನನ ಸಿಟ್ಟು ನೆತ್ತಿಗೇರುವುದೆಂದು ವಜೀರ್ ಸುಲ್ತಾನನಿಂದ ಅಪ್ಪಣೆಪಡೆದು ಮಾರೂಪನಬಳಿಗೆ ಹೋಗಿ "ಸುಲ್ತಾನರು ತಮ್ಮ ಮಗಳನ್ನು ನಿಮಗೆ ಕೊಟ್ಟು ವಿವಾಹ ಮಾಡಲು ನಿರ್ಧರಿಸಿದ್ದಾರೆ. ನಿಮ್ಮ ಅಭಿಪ್ರಾಯವೇನು? ಹೇಳಿದರೆ ಅದನ್ನು ಅವರಿಗೆ ತಿಳಿಸುವೆನು" ಎಂದನು.

"ಸುಲ್ತಾನರ ಆದರಾಧಿಕ್ಯಕ್ಕೆ ನಾನು ತುಂಬಾ ಕೃತಜ್ಞನಾಗಿದ್ದೇನೆ. ಆದರೆ ನನ್ನ ಪರಿವಾರ ಬರುವತನಕ ಕಾಯುವುದು ಸೂಕ್ತವಾಗಿ ತೋರುವುದು. ರಾಜಕುಮಾರಿಯನ್ನು ಮದುವೆಯಾಗುವುದೆಂದರೆ ಸುಮ್ಮನಾಯಿತೇ? ಮದುಮಗಳಿಗೆ ಕನಿಷ್ಠಪಕ್ಷ ಐದು ಸಾವಿರ ಚೀಲ ಬಂಗಾರ ಕೊಡಬೇಕು. ಮದುವೆಯದಿನ ನಗರದ ಬಡಬಗ್ಗರಿಗೆ ಕನಿಷ್ಠ ಸಾವಿರ ಚೀಲ ಚಿನ್ನವನ್ನು ದಾನಮಾಡಬೇಕು.





ಸೈನಿಕರ ವಿನೋದವಿಲಾಸಗಳಿಗೆ ಮತ್ತೊಂದು ಸಾವಿರ ಥೈಲಿ ಚಿನ್ನ ಬೇಕಾಗುತ್ತದೆ. ಮದುಮಗಳಿಗೆ ನೂರು ರತ್ನಗಳನ್ನಾದರೂ ಕೊಡಬೇಡವೇ? ರಾಣೀವಾಸದ ದಾಸೀ ಜನರಿಗೆ ಮತ್ತೊಂದು ನೂರು ರತ್ನಗಳನ್ನು ಬಹುಮಾನವಾಗಿ ಕೊಡದಿದ್ದರೆ ಹೇಗೆ? ನನ್ನ ಪರಿವಾರ ಬರುವತನಕ ಇದೆಲ್ಲಾ ಹೇಗೆ ಸಾಧ್ಯ?" ಎಂದ ಮಾರೂಪ್. ವಜೀರನು ಈ ವಿಷಯವನ್ನು ಸುಲ್ತಾನನಿಗೆ ತಿಳಿಸಿದನು.

ಸುಲ್ತಾನನ ತಲೆ ತಿರುಗಿತು. ಕೂಡಲೇ ಮಾರೂಪ್‌ನನ್ನು ಕರೆಯಿಸಿ "ಎಲೈ ವಣಿಕ್ ಶ್ರೇಷ್ಠನೇ, ಈ ಮದುವೆ ಕೂಡಲೇ ನೆರವೇರಲಿ. ಮದುವೆಗೆ ಆಗುವ ಖರ್ಚನ್ನು ನಾನೇ ವಹಿಸಿಕೊಳ್ಳುವೆನು. ನನ್ನ ಖಜಾನೆಯಲ್ಲಿ ಯಥೇಚ್ಛವಾಗಿ ಹಣವಿದೆ. ನಿನಗೆ ಬೇಕಾದಷ್ಟು ಹಣವನ್ನು ಯಾರ ಅಭ್ಯಂತರವೂ ಇಲ್ಲದೆ ತೆಗೆದುಕೊಳ್ಳಬಹುದು. ಮದುಮಗಳಿಗೆ ನಿನ್ನ ಪರಿವಾರ ಬಂದನಂತರ ಬಹುಮಾನ ಕೊಡಬಹುದು. ಮುಹೂರ್ತ ಮುಂದೂಡುವುದು ನನಗಿಷ್ಟವಿಲ್ಲ" ಎಂದ. ಮಾರೂಪ್ ಆಗಲೆಂದ. ಸುಲ್ತಾನನ ಮಗಳನ್ನು ಮಾರೂಪ್‌ನಿಗೆ ಕೊಟ್ಟು, ವಿವಾಹ ಮಾಡಲು ಸಕಲಸಿದ್ಧತೆಗಳಾದುವು. ಮಾರೂಪ್ ನನ್ನು ಮದುಮಗನನ್ನಾಗಿ ಅಲಂಕರಿಸಿ ಮಂಟಪದಲ್ಲಿ ಕೂರಿಸಿದರು. ಮದುಮಗನಮುಂದೆ ಗಾಯಕರು ಹಾಡಿದರು. ನರ್ತಕಿಯರು ನಾಟ್ಯವಾಡಿದರು. ವಿದೂಷಕರು ಹಾಸ್ಯಮಾಡಿದರು. ಜಟ್ಟಿಗಳು ಮಲ್ಲಯುದ್ಧ ಮಾಡಿದರು. ಆ ದಿನವೆಲ್ಲ ಮಾರೂಪ್ ಬೊಕ್ಕಸದಿಂದ ಥೈಲಿಗಟ್ಟಳೆ ಚಿನ್ನವನ್ನು ತರಿಸಿ ಎಲ್ಲರಿಗೂ ಹಂಚುತ್ತಿದ್ದನು. ಬೊಕ್ಕಸದಿಂದ ಥೈಲಿಗಳನ್ನು ತಂದುಕೊಟ್ಟು ಕೊಟ್ಟು ವಜೀರನ ಕೈಗಳು ಬಿದ್ದುಹೋದವು. ಆತನು ಮಾರೂಪನಬಳಿಗೆ ಬಂದು ರಹಸ್ಯವಾಗಿ "ಅಲ್ಲಾ ನಿನ್ನನ್ನು ಕ್ಷಮಿಸಲಾರ. ನಗರದ ವರ್ತಕರ ಹಣವನ್ನೆಲ್ಲಾ ಪೋಲು ಮಾಡಿದೆ. ಈಗ ಸುಲ್ತಾನರ ಬೊಕ್ಕಸವನ್ನು ಸೂರೆಮಾಡುತ್ತಿರುವೆ," ಎಂದ.

"ನಿಮ್ಮ ಸೊತ್ತೇನು ಹೋಯಿತು ವಜೀರರೇ? ನನ್ನ ಪರಿವಾರಬರಲಿ, ಸುಲ್ತಾನರಿಗೆ ನಾನು ಈಗ ಖರ್ಚುಮಾಡಿದ ಹಣಕ್ಕಿಂತ ಸಾವಿರಪಾಲು ಹೆಚ್ಚು ಕೊಡುತ್ತೇನೆ.

ನೀವೇನೂ ಚಿಂತಿಸಬೇಡಿ" ಎಂದ ಮಾರೂಪ್. ಒಂದೇಸವನೇ ನಲವತ್ತು ದಿನ ಉತ್ಸವಗಳು ವಿಜೃಂಭಣೆಯಿಂದ ನಡೆದುವು. ಮದುವೆಯ ದಿನ ಬಂತು. ಅಂದು ಮೆರವಣಿಗೆಯಲ್ಲಿ ಮಾರೂಪ್ ಎರಡು ಕೈಗಳಿಂದ ಚಿನ್ನದ ನಾಣ್ಯಗಳನ್ನು ತೆಗೆದು ಬೀದಿಯಲ್ಲಿ ಎರಚಲಾರಂಭಿಸಿದನು.

ಮದುಮಗ, ಮದುಮಗಳನ್ನು ಶಯ್ಯಾಗಾರಕ್ಕೆ ಕಳುಹಿಸಿದರು. ಕದಮುಚ್ಚಿದ ಕೂಡಲೇ ಮಾರೂಪ್‌ನು ನೆಲದ ಮೇಲೆ ಕುಳಿತು ಕಣ್ಣೀರುಸುರಿಸಲಾರಂಭಿಸಿದನು.

ಸುಲ್ತಾನನ ಮಗಳು ಅವನಬಳಿ ಬಂದು "ಯಾಕೆ ಚಿಂತಿಸುತ್ತಿರುವಿರಿ? ಏನು. ಏನಾಯಿತು" ಎಂದಳು.

"ಎಲ್ಲಾ ಅಲ್ಲಾನ ಮಹಿಮೆ. ಆದರೆ ಹೀಗಾಗಲು ನಿಮ್ಮ ತಂದೆಯೇ ಕಾರಣ," ಎಂದ ಮಾರೂಪ್.

"ಈಗೇನಾಯಿತು?" ಸುಲ್ತಾನನಮಗಳು ಕಕ್ಕಾಬಿಕ್ಕಿಯಾಗಿ ಕೇಳಿದಳು.

"ಏನಾಗುವುದೇನುಬಂತು? ನನ್ನನ್ನು ನೋಡಿ ಜನರೆಲ್ಲಾ ನಗುತ್ತಿದ್ದಾರೆ. ನನ್ನ ಪರಿವಾರ ಬರುವತನಕ ತಡಮಾಡಿದ್ದರೆ ನಿನಗೆ ಎಂಥ ಅಮೂಲ್ಯವಾದ ಬಟ್ಟೆಗಳನ್ನು ಕೊಡುತ್ತಿದ್ದೆ, ಆಭರಣಗಳನ್ನು ಕೊಡುತ್ತಿದ್ದೆ, ಇಷ್ಟು ವೈಭವವಾಗಿ ಮದುವೆಮಾಡಿಸಿಕೊಂಡೂಸಹ, ಮದುಮಗಳಿಗೆ ಬಹುಮಾನ ಕೊಡಲಾರದಾದೆ? ಜನರಕಣ್ಣಲ್ಲಿ ನಾನು ಪರಮ ನೀಚನಾದೆ" ಎಂದ ಮಾರೂಪ್. "ಓಹೋ, ಇದಕ್ಕೆ ಚಿಂತಿಸಬೇಕೆ?" ಎಂದಳು ಸುಲ್ತಾನನ ಮಗಳು ಮಂದಹಾಸದಿಂದ.



ಮದುವೆಯಾದ ಮಾರನೆಯ ದಿನ ಸುಲ್ತಾನನ ನೌಕರರಿಗೆ, ಪಾಕಶಾಲೆಯವರಿಗೆ, ಎಲ್ಲರಿಗೂ ಸಾಮಾನ್ಯ ನೌಕರನಿಂದ ಹಿಡಿದು ವಜೀರನವರೆವಿಗೂ ಅವರವರ ಅಂತಸ್ತಿಗೆ ತಕ್ಕಂತೆ ಬಟ್ಟೆಬರೆಗಳನ್ನು, ಬಂಗಾರವನ್ನು ಬಹುಮಾನವಾಗಿ ಮಾರೂಪ್ ಕೊಟ್ಟನು. ಈರೀತಿ ದಾನಧರ್ಮಗಳು ಮತ್ತೊಂದು ಇಪ್ಪತ್ತು ದಿನಗಳು ನಡೆದುವು. ಸುಲ್ತಾನನ ಬೊಕ್ಕಸ ಬರಿದಾಯಿತು. ಮಾರೂಪನ ಪರಿವಾರ ಬರುವ ಸೂಚನೆ ಕಾಣಿಸಲಿಲ್ಲ. ಇದನ್ನು ನೋಡಿ ವಜೀರನು ಸುಲ್ತಾನನೊಂದಿಗೆ "ಮಹಾ

ಪ್ರಭೂ, ಖಜಾನೆ ಬರಿದಾಯಿತು. ಅಳಿಯಂದಿರ ಸಂಪತ್ತು ಬರುವ ಸೂಚನೆಯಂತೂ ಕಾಣಿಸದು. ಈಗೇನುಮಾಡಬೇಕೋ ನನಗೆ ತಿಳಿಯದಾಗಿದೆ,'' ಎಂದ.

ಸುಲ್ತಾನನು ಕಂಗಾಲಾದನು. "ಹೌದು, ಈಗೇನುಮಾಡಬೇಕು?'' ಎಂದು ದುಗುಡದಿಂದ ಕೇಳಿದನು. "ನನ್ನನ್ನು ಕೇಳಿದರೆ ಈತನಿಗೆ ಪರಿವಾರವೇ ಇಲ್ಲವೆಂದು ತೋರುವುದು. ನಮ್ಮನ್ನು ಮೋಸಗೊಳಿಸಿ, ಒಂದು ಕವಡೆ ಯಾದರೂ ಖರ್ಚುಮಾಡದೆ ನಿಮ್ಮ ಮಗಳನ್ನು ಮದುವೆಯಾಗಿ, ನಿಮ್ಮ ಬೊಕ್ಕಸವನ್ನು ಬರಿದುಮಾಡಿದ್ದಾನೆ. ಕೂಡಲೇ ಇವನಿಗೆ ತಕ್ಕಶಿಕ್ಷೆ ವಿಧಿಸಬೇಕು'' ಎಂದ ವಜೀರ. "ಆತನ ಯಥಾರ್ಥ ವಿಷಯ ತಿಳಿದರೆ ಚೆನ್ನ'' ಎಂದ ಸುಲ್ತಾನ ನಿಟ್ಟುಸಿರುಬಿಡುತ್ತಾ. "ಮಹಾಪ್ರಭೂ, ಗಂಡನ ಗುಟ್ಟು ಹೆಂಡತಿಯಮುಂದೆ ರಹಸ್ಯವಾಗಿರಲಾರದು. ಆತನ ಸಂಗತಿಯನ್ನರಿಯಲು ನಾನೊಂದು ಬಾರಿ ತಮ್ಮ ಮಗಳೊಂದಿಗೆ ಮಾತನಾಡಲು ಅವಕಾಶಕೊಡಿ'' ಎಂದು ಕೇಳಿದ ವಜೀರ.

ಸುಲ್ತಾನನು ಅದಕ್ಕೆ ಸಮ್ಮತಿಸಿದನು. ಒಂದು ತೆರೆಯಹಿಂದೆ ಸುಲ್ತಾನನ ಮಗಳು ಬಂದು ಕಳಿತಳು. ವಜೀರನು ಮತ್ತೊಂದು ಕಡೆ ನಿಂತು'' ಅಮ್ಮಾ, ಬೊಕ್ಕಸ ಬರಿದಾಯಿತು. ಆ ಪುಣ್ಯ ನಿಮ್ಮ ಪತಿರಾಯರು ಕಟ್ಟಿಕೊಂಡಿದ್ದಾರೆ. ಆತನಿಗೆ ಒಂದು ಪರಿವಾರವಿರುವುದಾಗಿ ದಿನಬೆಳಗಾದರೆ ಎಲ್ಲಕಡೆಯಿಂದಲೂ ಕೇಳುತ್ತಿದ್ದೇವೆ. ನೋಡಿದವರಿಲ್ಲ.



ಈ ಮಾರೂಪನವಿಷಯ ನಿಮಗೇನಾದರೂ ತಿಳಿದಿದ್ದರೆ ಹೇಳಿ. ಆತನು ನಂಬಿಕೆಗೆ ಪಾತ್ರನೆ? ನಾನು ಪ್ರಭುಗಳ ಅನುಮತಿ ಪಡೆದು ಈ ಪ್ರಕಾರವಾಗಿ ನಿಮ್ಮನ್ನು ಪ್ರಶ್ನಿಸುತ್ತಿದ್ದೇನೆ. ಅನ್ಯಥಾ ಭಾವಿಸಬಾರದು" ಎಂದ.

"ಪರಿವಾರ ಬಂದಕೂಡಲೇ ನನಗೆ ಮುತ್ತುಗಳನ್ನೂ, ಆಭರಣಗಳನ್ನೂ ಕೊಡುವುದಾಗಿ ಪ್ರತಿನಿತ್ಯ ಅವರು ಹೇಳುತ್ತಿರುತ್ತಾರೆ. ನಾನೂ ಮುತ್ತುಗಳನ್ನಾಗಲೀ, ಆಭರಣಗಳನ್ನಾಗಲೀ ಇದುವರೆವಿಗೂ ಕಂಡಿಲ್ಲ" ಎಂದಳು ಆಕೆ.

"ರಾಜಕುಮಾರಿ, ಇದರ ರಹಸ್ಯವನ್ನು ನೀವಿಂದು ತಿಳಿದುಕೊಳ್ಳಲೇಬೇಕು. ಗುಟ್ಟು ಬಿಟ್ಟುಕೊಡುವುದಿಲ್ಲವೆಂದು ಆತನಿಗೆ ಆಶ್ವಾಸನೆ ನೀಡಿ," ಎಂದ ವಜೀರ. "ಹಾಗೆಯೇ ಆಗಲಿ" ಎಂದು ಒಪ್ಪಿಕೊಂಡಳು ರಾಜಕುಮಾರಿ. ಆ ಪ್ರಕಾರ ಅಂದುರಾತ್ರಿ ಮಾರೂಪ್‌ನೊಂದಿಗೆ "ನೀವು ನನ್ನೊಂದಿಗಾದರೂ ನಿಜ ಹೇಳಬಾರದೆ? ನಿಮ್ಮಲ್ಲಿ ಸರಕುಗಳಾಗಲೀ, ಪರಿವಾರವಾಗಲೀ ಇಲ್ಲವೆಂದು ನಮ್ಮ ತಂದೆಯವರಿಗೆ ತಿಳಿದುಹೋಯಿತು. ಅವರು ನಿಮಗೆ ಕಠಿನಶಿಕ್ಷೆ ವಿಧಿಸಲಿದ್ದಾರೆ. ಮರೆಮಾಚದೆ ನನ್ನೊಂಗೆ ನಿಜಸ್ಥಿತಿಯನ್ನು ತಿಳಿಸಿ. ಸಾಧ್ಯವಾದರೆ ನಾನು ಸಹಾಯಮಾಡುವೆನು," ಎಂದಳು ರಾಜಕಮಾರಿ.

ಮಾರೂಪ್ ಮುಚ್ಚುಮರೆಯಿಲ್ಲದೆ ಯಥಾಸ್ಥಿತಿಯನ್ನು ಸುಲ್ತಾನನ ಮಗಳಿಗೆ ತಿಳಿಸಿದನು. ವಿಷಯವನ್ನು ಕೇಳಿ ಆಕೆ ದಂಗಾದಳು. "ಇಂಥ ದಗಾಕೋರತನವನ್ನು



ನಾನೆಂದೂ ಕೇಳಿಲ್ಲ. ನೀವು ಇಲ್ಲಿದ್ದರೆ ಮಾನ ಪ್ರಾಣಗಳು ಉಳಿಯುವಂತಿಲ್ಲ. ವಜೀರರು ಮತ್ತು ನಮ್ಮ ತಂದೆ ನಿಮ್ಮನ್ನು ಗಲ್ಲಿಗೇರಿಸುವುದು ಖಂಡಿತ. ನನ್ನ ಹತ್ತಿರ ಐವತ್ತು ಸಾವಿರ ದೀನಾರಗಳಿವೆ. ಅದನ್ನು ತೆಗೆದುಕೊಂಡು ಯಾವುದಾದರೂ ದೂರದೇಶಕ್ಕೆ ಹೊರಟುಬಿಡಿ. ಅಲ್ಲಿಂದ ಯಾರಮೂಲಕವಾದರೂ ನಿಮ್ಮ ಕ್ಷೇಮಸಮಾಚಾರವನ್ನು ತಿಳಿಸಿ" ಎಂದಳು. ಮಾರೂಫ್ ಹಣವನ್ನು ತೆಗೆದುಕೊಂಡು, ಸೇವಕರು ಧರಿಸುವ ಉಡುಪನ್ನು ಹಾಕಿಕೊಂಡು ಸುಲ್ತಾನನ ಅಶ್ವಶಾಲೆಯಲ್ಲಿದ್ದ ಉತ್ತಮಜಾತಿಯ ಕುದುರೆಯನ್ನು ಹತ್ತಿ ಪರಾರಿಯಾದನು. ಮಾರನೇಯದಿನ ಮುಂಜಾನೆ ಸುಲ್ತಾನನೂ ಮತ್ತೆ ಆತನ ವಜೀರನೂ ರಾಜಕುಮಾರಿಯನ್ನು ಕರೆಯಿಸಿದರು. ಆಕೆ ತೆರೆಯ ಹಿಂದೆ ಕುಳಿತನಂತರ ಸುಲ್ತಾನರು "ಅಮ್ಮಾ ನಿನ್ನ ಪತಿಯ ಸ್ಥಿತಿಗತಿಗಳ ವಿಷಯವೇನಾದರೂ ತಿಳಿಯಿತೇ?" ಎಂದು ಕೇಳಿದನು.

"ಚಾಡಿಹೇಳಿದವರ ನಾಲಗೆ ಸೀದು ಹೋದೀತು," ಎಂದಳು ಸುಲ್ತಾನನಮಗಳು.

"ಹಾಗೆಂದರೇನು ತಾಯಿ?" ಎಂದು ಸುಲ್ತಾನನು ಕೇಳಿದನು.

"ನಿನ್ನೆರಾತ್ರಿ ನನ್ನ ಪತಿರಾಯರಿಗೆ ಯಾರೋ ಒಂದು ಪತ್ರತಂದುಕೊಟ್ಟರು. ಆ ಪತ್ರವನ್ನು ನಾನೇ ಒಡೆದುನೋಡಿದೆ. ನನ್ನ ಗಂಡನ ಪರಿವಾರದಲ್ಲಿದ್ದ ಐನೂರುಮಂದಿ ಗುಲಾಮರು ಆ ಪತ್ರ ಬರೆದು ಕಳುಹಿಸಿದ್ದರು.



ಎರಡು ಸಾವಿರಮಂದಿ ದರೋಡೆಕಾರರು ಪರಿವಾರದಮೇಲೆ ಬಿದ್ದರಂತೆ. ಭಾರಿ ಕಾಳಗ ವಾಯಿತಂತೆ. ಅನೇಕ ಗುಲಾಮರೂ, ಹೇಸರ ಕತ್ತೆಗಳೂ ಮರಣಕ್ಕೆ ತುತ್ತಾಗಿ, ಸುಮಾರು ಎಪ್ಪತ್ತುಸಾವಿರ ದೀನಾರಗಳು ಬೆಲೆಬಾಳುವ ಸರಕು ನಷ್ಟವಾಯಿತಂತೆ. ಅಂತಲೇ ಪರಿವಾರ ತಡವಾಯಿತೆಂದು ತಮ್ಮ ಲೇಖನದಲ್ಲಿ ತಿಳಿಸಿದ್ದರು. ಅಷ್ಟು ಬೆಲೆಬಾಳುವ ಸರಕು ಹಾಳಾದರೂ ಅವರು ಧೃತಿಗೆಡದೆ "ಅದೇನುಮಹಾ" ಎಂತ ಅಂದರು. ಅವರು ಕೂಡಲೇ ಕುದುರೆ ಹತ್ತಿ ಹೊರಟುಬಿಟ್ಟರು. ತಾವೇ ಸ್ವತಃ ಹೋಗಿ ಪರಿವಾರವನ್ನು ಕರೆತರುವುದಾಗಿ ಹೇಳಿದರು" ಎಂದಳು ರಾಜಕುಮಾರಿ. ಸುಲ್ತಾನನು ಹಿಗ್ಗಿ ಹೀರೇಕಾಯಾದನು. ವಜೀರನಕಡೆ ನೋಡಿ "ಇನ್ನೆಂದಿಗೂ ನನ್ನೊಂದಿಗೆ ಸುಳ್ಳುಹೇಳಬೇಡ. ವಿಷಯ ತಿಳಿಯದಿದ್ದರೆ ಬಾಯಿಮುಚ್ಚಿಕೊಂಡು ಕುಳಿತುಕೊ" ಎಂದು ಗದರಿಸಿದನು.

ಇತ್ತ ಮಾರೂಪ್ ಕುದುರೆ ಹತ್ತಿ ಮರುಭೂಮಿಯಮಾರ್ಗ ಹಿಡಿದನು. ಅವನ ಮನಸ್ಸೆಲ್ಲಾ ಸುಲ್ತಾನನ ಮಗಳಲ್ಲಿ ನೆಲಸಿತ್ತು. ಮಧ್ಯಾಹ್ನದವೇಳೆಗೆ ಅವನು ಒಂದು ಗ್ರಾಮವನ್ನು ಸಮೀಪಿಸಿದನು. ಅವನಿಗೆ ತುಂಬಾ ಹಸಿವಾಯಿತು. ಸಮೀಪದಲ್ಲಿದ್ದ ಒಂದು ಹೊಲವನ್ನು ಉಳುತ್ತಿದ್ದ ರೈತನೊಬ್ಬನು ಮಾರೂಪನನ್ನು ನೋಡಿ "ದೊರೆಗಳಿಗೆ ಶುಭವಾಗಲಿ" ಎಂದು ನೆಲಮುಟ್ಟಿ ಸಲಾಮು ಮಾಡಿದನು. ಮಾರೂಪ್ ಯಾರೋ ಒಬ್ಬ





ನೇಗಿಲುಹಿಡಿದು ಉಳಲು ಪ್ರಾರಂಭಿಸಿದನು. ಎತ್ತುಗಳು ಕೊಂಚದೂರ ಹೋದನಂತರ ನೇಗಿಲಿಗೆ ಏನೋ ಅಡ್ಡತಗಲಿತು. ಆತನು ಎಷ್ಟು ಪ್ರಯತ್ನಿಸಿದರೂ ಎತ್ತುಗಳು ಮುಂದಕ್ಕೆ ಹೆಜ್ಜೆ ಹಾಕಲಿಲ್ಲ.

ನೇಗಿಲನ್ನು ಏನು ತಡೆಯಿತೋ ನೋಡಲು ಮಾರೂಪ್ ಹಾರೆಯಿಂದ ಅಗೆಯಲು ಒಂದು ಚಚ್ಚೌಕದ ಕಲ್ಲು ಚಪ್ಪಡಿ ಕಾಣಿಸಿತು. ಅವನು ಅದನ್ನು ಕಂಡು ಆಶ್ಚರ್ಯಪಟ್ಟನು. ತನ್ನ ಶಕ್ತಿಯನ್ನೆಲ್ಲಾ ವಿನಿಯೋಗಿಸಿ ಬಂಡೆಯನ್ನು ಒಂದುಪಕ್ಕಕ್ಕೆ ತಳ್ಳಿದನು. ಬಂಡೆಯ ಕೆಳಗೆ ಒಂದು ಪಾತಾಳಗೃಹವಿತ್ತು. ಕೆಳಗಿಳಿಯಲು ಸುಸಜ್ಜಿತವಾದ ಮೆಟ್ಟಿಲುಗಳಿದ್ದುವು.

ಮಾರೂಪ್ ಮೆಟ್ಟಿಲಲ್ಲಿಳಿದು ಹೋದನು. ಕೆಳಗೆ ಒಂದು ಪಡಸಾಲೆಯಿತ್ತು. ಅದರಲ್ಲಿ ನಾಲ್ಕು ಕೋಣೆಗಳಿದ್ದುವು. ಅವುಗಳಲ್ಲಿ ಚಿನ್ನದ ರಾಶಿ, ಮುತ್ತಿನರಾಶಿ ಮತ್ತು ರತ್ನಗಳ ರಾಶಿ ಗಳಿದ್ದುವು. ನೂರಾರು ವರ್ಷಗಳ ಹಿಂದೆ ಯಾರೋ ರಾಜವಂಶದವರು ಆ ನೆಲಮಾಳಿಗೆ ಯಲ್ಲಿ ತಮ್ಮ ಧನವನ್ನು ಅಡಗಿಸಿಟ್ಟಿದ್ದರು.

ತರುವಾಯ ಆ ರಾಜ್ಯ ನಾಶವಾಗಿರಬೇಕು. ಆ ಪ್ರದೇಶವೆಲ್ಲಾ ಮರುಭೂಮಿ ಯಾಗಿರ ಬಹುದು. ಮಾರೂಪ್ ತನ್ನ ಅದೃಷ್ಟವನ್ನು ತಾನೇ ನಂಬದಾದನು. ಅವನು ಹೊರಗೆ ಬಂದು, ಚಪ್ಪಡಿಯನ್ನುಯಥಾಸ್ಥಾನದಲ್ಲಿಟ್ಟು, ಅದರಮೇಲೆ ಮಣ್ಣು ಎರಚಿ, ರೈತನಿಗಾಗಿ ಎದುರುನೋಡುತ್ತ ಕುಳಿತನು.

ಅಧಿಕಾರಿ ಎಂದು ಆ ಬಡರೈತನು ಭಾವಿಸಿದ. ಮಾರೂಪ್ ಕುದುರೆಯಿಂದಿಳಿದು "ನೀನು ಯಾರಪ್ಪಾ? ಅಲ್ಲಿ ಕಾಣಿಸುವ ಗ್ರಾಮದಲ್ಲಿ ಯಾವುದಾದರೊಂದು ಭೋಜನಗೃಹ ವಿರು ವುದೇ" ಎಂದು ಕೇಳಿದ.

"ಈಹೊಲ ನನ್ನದು ಸ್ವಾಮಿ. ನನ್ನ ಗ್ರಾಮ ತೀರಾ ಚಿಕ್ಕದು. ಇಲ್ಲಿ ಖಾನಾವಳಿಗಳಿಲ್ಲ. ನಿಮಗೇಕೆ ಅಷ್ಟುತೊಂದರೆ. ನೀವಿಲ್ಲೇ ಇರಿ. ಮನೆಗೆಹೋಗಿ ನಿಮಗೆ ಊಟತರುತ್ತೇನೆ. ನಂತರ ನೀವು ಮುಂದಕ್ಕೆ ಹೋಗಬಹುದು" ಎಂದು ರೈತನು ಗ್ರಾಮದಕಡೆ ನಡೆದನು.

ಎಷ್ಟುಹೊತ್ತಾದರೂ ರೈತನು ಬರಲಿಲ್ಲ. ತನ್ನಿಂದ ಅವನ ಹೊಲದಕೆಲಸ ಕಾರ್ಯಗಳು ಹಾಳಾದುವು ಎಂದುಕೊಂಡು ಮಾರೂಪ್



ವನ್ನು ಉತ್ತು ಕಾಯಕಷ್ಟಮಾಡಿ ಎಷ್ಟೊಂತ ಸಂಪಾದಿಸ ಬಲ್ಲೆ" ಎಂದನು.

ರೈತನ ಆನಂದಕ್ಕೆ ಮೇರೆ ಇಲ್ಲವಾಯಿತು. ಮಾರೂಪ್ ತನಗೆ ಸುಲ್ತಾನನ ಮಗಳು ಕೊಟ್ಟ ಯಾವತ್ತೂ ಹಣವನ್ನು ರೈತನಿಗೆ ಕೊಟ್ಟು ಆ ಹೊಲವನ್ನು ತನ್ನ ಸ್ವಾಧೀನಕ್ಕೆ ವಹಿಸಿಕೊಂಡನು. ಆ ರೈತನ ಮನೆಯಲ್ಲೆ ಕೆಲವುದಿನ ವಿದ್ದು, ಕಣ್ಣಿಗೆ ಕಾಣಿಸಿದ ಹೇಸರ ಕತ್ತೆಗಳನ್ನೆಲ್ಲಾ ಕೊಂಡುಕೊಳ್ಳಲಾರಂಭಿಸಿದನು. ಸಣ್ಣಪುಟ್ಟ ಪರಿವಾರಗಳು ಅತ್ತಕಡೆ ಬಂದರೆ ಅವುಗಳನ್ನೂ, ಅವುಗಳೊಂದಿಗಿದ್ದ ಗುಲಾಮರನ್ನೂ ತಾನು ಕ್ರಯಕೊಟ್ಟು ಕೊಂಡುಕೊಂಡು ಬಿಡುತ್ತಿದ್ದನು.

ಒಂದು ತಿಂಗಳಲ್ಲಿ ಅವನು ಐನೂರು ಹೇಸರ ಕತ್ತೆಗಳನ್ನೂ, ಐನೂರು ಗುಲಾಮರನ್ನೂ ಕೊಂಡುಕೊಂಡನು. ಹೊಲದಲ್ಲಿ ತನಗೆ ದೊರಕಿದ ರತ್ನರಾಶಿಗಳನ್ನೆಲ್ಲಾ ಕತ್ತೆಗಳಮೇಲೆ ಹೊರಿಸಿಕೊಂಡು, ಮತ್ತೆ ಖತಾನ್ ನಗರಕ್ಕೆ ಹೊರಟನು.

ಇಷ್ಟರಲ್ಲಿ ಆ ನಗರದ ಸುಲ್ತಾನನು ತುಂಬಾ ಪೇಚಾಟದಲ್ಲಿದ್ದನು. ಬೊಕ್ಕಸಬರಿದಾಗಿ ಒಂದು ತಿಂಗಳಾಯಿತು. ತನ್ನ ಗಂಡನು ಪರಿವಾರವನ್ನು ತರಲುಹೋದನೆಂದು ಆತನ ಮಗಳು ಹೇಳಿದ್ದಳು. ಅವನು ಇಂದೋ ನಾಳೆಯೋ ಬರಬಹುದೆಂದು ಸುಲ್ತಾನನು ಚಾತಕಪಕ್ಷಿಯಂತೆ ಎದುರು ನೋಡುತ್ತಿದ್ದನು. ಹಾಗಿರುವಾಗ ಒಂದುದಿನ ವಜೀರನು "ಮಹಾಪ್ರಭೂ,

ಕೊಂಚಹೊತ್ತಿಗೆ ರೈತನು ವಿವಿಧ ಭಕ್ಷ್ಯಗಳನ್ನು ತೆಗೆದುಕೊಂಡು ಅಲ್ಲಿಗೆಬಂದನು. ಮಾರೂಪನನ್ನು ನೋಡಿ ಅತಿ ವಿನಯದಿಂದ "ಕ್ಷಮಿಸಬೇಕು ಪ್ರಭುಗಳು. ನಿಮಗೋಸ್ಕರ ಪ್ರತ್ಯೇಕವಾಗಿ ಅಡಿಗೆ ಸಿದ್ಧಪಡಿಸ ಬೇಕಾಯಿತು. ಕಾಲವಿಲಂಬವಾಯಿತು, ಮನ್ನಿಸಿ" ಎಂದು ಕೇಳಿಕೊಂಡನು.

"ಅಯ್ಯಾ, ನಿನ್ನನ್ನು ಕಂಡರೆ ತುಂಬಾ ಒಳ್ಳೆಯವನಂತೆ ತೋರುವುದು. ಬುದ್ಧಿವಂತನಂತೆ ಕಾಣುವುದು. ನನ್ನಹತ್ತಿರ ಐವತ್ತು ಸಾವಿರ ದೀನಾರಗಳಿವೆ. ಅದನ್ನು ತೆಗೆದುಕೊಂಡು ಈ ಹೊಲ ನನಗೆ ಕೊಟ್ಟುಬಿಡು. ಹಣದಿಂದ ಯಾವುದಾದರೊಂದು ವ್ಯಾಪಾರ ಮಾಡಿದರೆ ನೀನು ಸುಖಪಡುವೆ. ಈ ಹೊಲ

ನಿಮ್ಮ ಮಗಳು ಹೇಳಿದ ಸುಳ್ಳನ್ನು ನಂಬಿ ಭ್ರಮಿಸುತ್ತಿರುವಿರಿ. ನಿಮ್ಮ ಅಳಿಯ ಹೋದುದು ಸಂಪತ್ತು ತರಲಲ್ಲ, ಪ್ರಾಣ ಉಳಿಸಿಕೊಳ್ಳಲು ಪಲಾಯನ ಮಾಡಿರುವನು. ಅವನಿಗೆಲ್ಲಿಂದ ಬರಬೇಕು ಪರಿವಾರ" ಎಂದು ತಿರಸ್ಕಾರಪೂರಿತನಾಗಿ ನುಡಿದ.

ಸರಿಯಾಗಿ ಅದೇ ಸಮಯಕ್ಕೆ ಭಟನೊಬ್ಬನು ಬಂದು ಸುಲ್ತಾನನಿಗೆ ನೆಲಮುಟ್ಟಿ ಸಲಾಮುಮಾಡಿ "ಮಹಾಪ್ರಭೂ, ಅಳಿಯಂದಿರು ಬರುತ್ತಿದ್ದಾರೆ" ಎಂದ.

ಸುಲಾನನ ಮುಖವರಳಿತು, ಮಂತ್ರಿಯ ಮುಖ ಬಾಡಿತು. ಮಾರೂಪನು ಬಂದು ಸುಲ್ತಾನನನ್ನು ಅಪ್ಪಿಕೊಂಡು "ನಾನು ನೆನೆಸಿದುದಕ್ಕಿಂತಲೂ ಹೆಚ್ಚು ನಷ್ಟವಾಯಿತು. ನನ್ನ ಸೊತ್ತಿನಲ್ಲಿ ಸ್ವಲ್ಪಭಾಗಮಾತ್ರ ಉಳಿಯಿತು. ನೋಡುವಿರಂತೆ ಬನ್ನಿ" ಎಂದು ಸುಲ್ತಾನನನ್ನು ಕರೆದುಕೊಂಡು ಹೋದನು.

ರಾಜಭವನದ ಮುಂದಿದ್ದ ಆವರಣದಲ್ಲಿ ಮೂಟೆಗಳನ್ನೆಲ್ಲಾ ಇಳಿಸಲಾಗಿತ್ತು. ಅವುಗಳನ್ನು ಹೊತ್ತು ತಂದ ಹೇಸರಕತ್ತೆಗಳನ್ನು ಸಾಲಾಗಿ ನಿಲ್ಲಿಸಿದ್ದರು. ಧನರಾಶಿಯನ್ನು ನೋಡಲುಬಂದ ಸಾವಿರಾರು ಜನರನ್ನು ಭಟರು ತಡೆದು ದೂರ ನಿಲ್ಲಿಸಿದ್ದರು.

ಮಾರೂಪ್ ತಂದ ರತ್ನರಾಶಿಯನ್ನು ಕಂಡು ಸುಲ್ತಾನನ ಕಣ್ಣುಗಳು ಕೋರೈಸಿದುವು. ಕೆಲವು ಮೂಟೆಗಳ ತುಂಬಾ ವಜ್ರಗಳು, ಕೆಲವು ಮೂಟೆಗಳಲ್ಲಿ ತಾಜಾ ವೈಡೂರ್ಯಗಳು,



ಕೆಲವು ಮೂಟೆಗಳಲ್ಲಿ ಮರಕತಗಳು, ಮತ್ತೆ ಕೆಲವುದರಲ್ಲಿ ಪುಷ್ಯರಾಗಗಳು, ಇನ್ನು ಕೆಲವು ಚೀಲಗಳಲ್ಲಿ ಅಡಿಕೆಕಾಯಿಗಾತ್ರದ ಮುತ್ತುಗಳು ಇದ್ದುವು.

"ಇದೆಲ್ಲವೂ ನಿನ್ನ ಸರಕೇ?" ಅಚ್ಚರಿಯಿಂದ ಕೇಳಿದ ಸುಲ್ತಾನ.

"ಎಷ್ಟೋ ಸರಕು ಹಾಳಾಯಿತು. ಉಳಿದಿರುವುದೆಲ್ಲಾ ನಮ್ಮ ಸೊತ್ತೆ" ಎಂದ ಮಾರೂಪ್ ಮಂದಹಾಸ ಬೀರುತ್ತಾ.

ಸುಲ್ತಾನನು ವಜೀರನಕಡೆ ತಿರುಗಿ "ಈಗೇನು ಹೇಳುವೆ?" ಎಂದ.

"ಮಹಾಪ್ರಭೂ, ಇದನ್ನು ನೋಡಿ ಮೋಸ ಬೀಳದಿರಿ. ಇದರಲ್ಲೇನೋ ಕೃತ್ರಿಮವಿರಬೇಕು" ಎಂದ ವಜೀರ.

ಸುಲ್ತಾನನಿಗೆ ಸಿಟ್ಟು ತಡೆಯಲಾಗಲಿಲ್ಲ. "ಈ ನೀಚನನ್ನು ಕರೆದುಕೊಂಡು ಹೋಗಿ ಗಲ್ಲಿಗೇರಿಸಿ" ಎಂದು ಕಠೋರವಾಗಿ ತನ್ನ ಭಟರಿಗೆ ಆಜ್ಞಾಪಿಸಿದ ಸುಲ್ತಾನ. ಅವರು ಕೂಡಲೇ ವಜೀರನನ್ನು ಹಿಡಿದು ಎಳೆದು ಕೊಂಡು ದೂರಹೋದರು.

ಆಗಲೇ ಸುಲ್ತಾನನು ಮಾರೂಪನನ್ನು ತನ್ನ ವಜೀರನನ್ನಾಗಿ ನೇಮಿಸಿದನು. ತನ್ನ ನಂತರ ಆತನೇ ಸುಲ್ತಾನನೆಂದು ರಾಜ್ಯ ದೊಳಗೆ ಪ್ರಕಟಿಸಿದನು.

ಮಾರೂಪನ ಪರಿವಾರ ಬಂದುಸೇರಿದ ಪ್ರಯುಕ್ತ ಒಂದು ಭಾರಿ ಔತಣ ಕೂಟ ಏರ್ಪಡಿಸಲಾಯಿತು. ನಗರದ ವರ್ತಕಗಣ ಕ್ಕೆಲ್ಲಾ ಆಹ್ವಾನನೀಡಲಾಯಿತು. ಆಲಿಯೂ ಸಹ ಔತಣ ಕೂಟಕ್ಕೆ ಬಂದಿದ್ದನು. ಮಾರೂಪ್ ಎಲ್ಲರಿಗೂ ಅವರಿತ್ತ ಹಣಕ್ಕೆ ಎರಡರಷ್ಟು ಕೊಟ್ಟು ತೃಪ್ತಿಪಡಿಸಿ ಕೈಮುಗಿದ. ಎಲ್ಲರಿಗೂ ಆದ ಆನಂದವೂ ಆಶ್ಚರ್ಯವೂ ಅಷ್ಟಿಷ್ಟಲ್ಲ.

"ನಮ್ಮ ಹಣ ಎಲ್ಲಿಗೂ ಹೋಗುವುದಿಲ್ಲ ವೆಂದು ನಮಗೆ ತಿಳಿದಿತ್ತು. ಆದರೆ ನಾವು ಚಿಲ್ಲರೆಪಲ್ಲರೆ ವ್ಯಾಪಾರಿಗಳು. ಅನಿರ್ದಿಷ್ಟಕಾಲ ತಡೆಯಲು ಸಾಧ್ಯವಾಗಲಿಲ್ಲ," ಎಂದರು ಆ ವರ್ತಕರು.

ಆಲಿಯ ಮುಖ ಬಿಳಿಚಿಕೊಂಡಿತು. ಮಾರೂಪ್ ಈ ಸಂಪತ್ತನ್ನೆಲ್ಲಾ ಎಲ್ಲಿಂದ ತಂದನೋ ಅವನಿಗೆ ತಿಳಿಯದಾಯಿತು.

ಆ ರಾತ್ರಿ ಸುಲ್ತಾನನ ಮಗಳು ತನ್ನ ಆಚ್ಚರಿಯನ್ನು ಗಂಡನಿಗೆ ತಿಳಿಸಿ "ಈ ಸೊತ್ತೆಲ್ಲಾ ನಿಮ್ಮದೆ? ಮತ್ತೆ ನೀವು ಆ ದಿನ ನನ್ನ ಪ್ರೇಮವನ್ನು ಪರೀಕ್ಷಿಸಲು ಹಾಗೆ ಹೇಳಿ ಈ ಆಟ ಹೂಡಿದಿರಾ?" ಎಂದು ಕೇಳಿದಳು. ಆಕೆಯ ಮುಖದಲ್ಲಿ ಒಂದು ವಿಧವಾದ ವಿಶೇಷಕಳೆಯಿತ್ತು.

ಮಾರೂಪ್ ಆಕೆಗೆ ನಿಜಸಂಗತಿಯನ್ನು ತಿಳಿಸಿದನು. ಅವರಿಬ್ಬರೂ ಬಹಳಕಾಲ ಸುಖ ವಾಗಿ ಬಾಳಿ, ಅನೇಕ ಮಕ್ಕಳನ್ನು ಪಡೆದರು. ಸುಲ್ತಾನನು ತೀರಿ ಕೊಂಡನಂತರ ಮಾರೂಪ್ ಖತಾನ್‌ನಗರದ ಸುಲ್ತಾನನಾಗಿ ಅನೇಕ ವರ್ಷಗಳಕಾಲ ವೈಭವದಿಂದ ರಾಜ್ಯಭಾರ ಮಾಡಿದನು.





# ಬಾಲ್ಯ ಸ್ನೇಹಿತರು

ಒಂದಾನೊಂದು ಗ್ರಾಮದಲ್ಲಿ ಸಂಗಯ್ಯ, ಶರಭಯ್ಯ ಎಂಬ ಇಬ್ಬರು ಯುವಕರಿದ್ದರು. ಅವರು ಬಾಲ್ಯದಿಂದಲೂ ಒಟ್ಟಿಗಿದ್ದು ಪ್ರಾಣ ಸ್ನೇಹಿತರಾಗಿದ್ದರು.

ಕಾಲಕ್ರಮೇಣ ಹೊಟ್ಟೆಪಾಡಿಗಾಗಿ ಶರಭಯ್ಯನು ಆ ಗ್ರಾಮವನ್ನು ಬಿಟ್ಟು ದೂರ ದೇಶಕ್ಕೆ ಹೋದನು. ಸಂಗಯ್ಯ ತನಗಿದ್ದ ಹೊಲಗದ್ದೆಗಳಲ್ಲಿ ಬೇಸಾಯ ಮಾಡಿಕೊಂಡು ಹಣ ಸಂಗ್ರಹಿಸಿದ. ದನಕರುಗಳನ್ನು ಕೊಂಡು ಕೊಂಡ. ಮದುವೆಯಾದ, ದೊಡ್ಡ ಮನೆ ಕಟ್ಟಿಕೊಂಡ. ಆತನ ಸ್ಥಿತಿಗತಿಗಳು ಉತ್ತಮವಾಗಿದ್ದುವು. ತುಂಬಾ ಅಭಿವೃದ್ಧಿಪಡೆದನು.

ಹಳ್ಳಿಬಿಟ್ಟ ಏಳು ವರ್ಷಗಳ ನಂತರ ಯಾವುದೋ ಕೆಲಸಕ್ಕಾಗಿ ಶರಭಯ್ಯ ಆ ಗ್ರಾಮಕ್ಕೆ ಬಂದ. ಬಂದವನೇ ಮೊದಲು ಬಾಲ್ಯಸ್ನೇಹಿತನಾದ ಸಂಗಯ್ಯನನ್ನು ಕಂಡು ಮಾತನಾಡಲು ಹೊರಟ. ಹಿಂದೆ ಚಿಕ್ಕ ಮನೆಯಿದ್ದ ಸ್ಥಳದಲ್ಲಿ ಈಗ ಭಾರಿ ಭವನವಿತ್ತು. ಅದರ ಎದುರಿಗಿದ್ದ ಗೇರುಮರ ಈಗ ಭಾರಿ ವೃಕ್ಷವಾಗಿತ್ತು. ಅದರ ಕೆಳಗಿನ ಜಗುಲಿಯಲ್ಲಿ ಸುಖವಾಗಿ ವಿಶ್ರಮಿಸಬಹುದಾಗಿತ್ತು.

"ಪರವಾಯಿಲ್ಲ. ಸಂಗಯ್ಯ ಚೆನ್ನಾಗಿದ್ದಾನೆ" ಎಂದುಕೊಂಡು ಮನೆಯನ್ನು ಸಮೀಪಿಸುತ್ತಿರುವಾಗ, ಅಂಗಳದಲ್ಲಿದ್ದ ನಾಯಿಯೊಂದು ಬೊಗಳುತ್ತಾ ಶರಭಯ್ಯನಕಡೆ ಧಾವಿಸಿ ಬಂದಿತು.

ನಾಯಿ ಬೊಗಳಿದ್ದನ್ನು ಕೇಳಿ ಸಂಗಯ್ಯನ ಹೆಂಡತಿ ಬಾಗಿಲನ್ನು ತೆಗೆದು, ನಾಯಿಯನ್ನು ಗದರಿಸಿ, ಶರಭಯ್ಯನನ್ನು ದುರುಗುಟ್ಟಿಕೊಂಡು ನೋಡಿದಳು.

"ಸಂಗಯ್ಯನ ಮನೆ ಇದೇನೇ ತಾಯಿ?" ಎಂದು ಶರಭಯ್ಯ ಕೇಳಿದ. ಹೌದೆಂದು ಆಕೆ ತಲೆಯಾಡಿಸಿದಳು.

"ಮನೆಯಲ್ಲಿದಾನೆಯೇ? ಎಲ್ಲಿಗೆ ಹೋದನೋ ಗೊತ್ತೇ?" ಎಂದು ಅವಳನ್ನು ಕೇಳಿದ ಶರಭಯ್ಯ.

"ನನಗೇನೂ ತಿಳಿಯದು. ನನ್ನೊಂದಿಗೆ ಹೇಳಿ ಹೋಗಿಲ್ಲ" ಎಂದು ಉತ್ತರಕೊಟ್ಟಳು

ಯಚ್. ವೆಂಕಟಕೃಷ್ಣರಾವ್




ಸಂಗಯ್ಯನ ಹೆಂಡತಿ. "ತಾಯಿ, ನಾನೂ ಸಂಗಯ್ಯನೂ ಬಾಲ್ಯಸ್ನೇಹಿತರು. ಏಳು ವರ್ಷಗಳ ಹಿಂದೆ ನಾನು ಈ ಊರನ್ನು ಬಿಟ್ಟೆ. ಈಗ ನಾನು ನನ್ನ ಆ ಗೆಳೆಯನನ್ನು ನೋಡಿಕೊಂಡು ಹೋಗಲು ಬಂದೆ. ಆತ ನನ್ನ ನೋಡುವ ಅದೃಷ್ಟವಿಲ್ಲ" ಎಂದು ಹೇಳಿದ ಶರಭಯ್ಯ.

ಸಂಗಯ್ಯನ ಹೆಂಡತಿ ಏನೂ ಹೇಳಲಿಲ್ಲ. ಮಾತ್ರವಲ್ಲ, ಶರಭಯ್ಯನನ್ನು ಮನೆಯೊಳಕ್ಕೆ ಬರುವಂತೆ ಆಹ್ವಾನಿಸಲೂ ಇಲ್ಲ. ಬಿಸಿಲು ಬಾಧೆಕೊಡುವಷ್ಟು ಸುಡುತಿತ್ತು. ಶರಭಯ್ಯ ಗೇರುಮರದ ಕೆಳಗಿದ್ದ ಜಗಲಿಯಮೇಲೆ ಕುಳಿತು, ಅಂಗವಸ್ತ್ರದಿಂದ ಬೆವರನ್ನೊರಸಿ ಕೊಳ್ಳುತ್ತಾ "ತಿಳಿಯದೆ ಕೇಳುತ್ತೇನೆ, ಸಂಗಯ್ಯನಿಗೆ ನೀನೇನಾಗಬೇಕು ತಾಯಿ? ಹೆಂಡತಿಯೇ?" ಎಂದು ಕೇಳಿದ. ಆಕೆ ಹೌದೆಂದು ತಲೆಯಾಡಿಸಿದಳು.

"ಜೋಡಿ ಸೊಗಸಾಗಿದೆ. ಹೊಸದಾಗಿ ಮದುವೆಯಾದಂತಿದೆ. ಇನ್ನೂ ಮಕ್ಕಳುಮರಿಯಿಲ್ಲವೆಂದು ಕಾಣುವುದು. ಅಬ್ಬಾ! ಉರಿಬಿಸಿಲು. ಒಂದೇ ದಾಹ. ಕುಡಿಯಲು ಸ್ವಲ್ಪ ಸೀನೀರು ಕೊಡುವೆಯಾ ತಾಯಿ?" ಎಂದ ಶರಭಯ್ಯ.

ಆಕೆ ಒಳಕ್ಕೆ ಹೋಗಿ ಒಂದು ಲೋಟಾ ನೀರು ತಂದು ಕೊಟ್ಟಳು. ನೀರು ಬಿಂದಿಗೆಯಲ್ಲಿತ್ತಾದುದರಿಂದ ತಣ್ಣಗಿರಲಿಲ್ಲ. ನೀರನ್ನು ಬಾಯಿಗೆ ಸುರಿದುಕೊಂಡ. ಏನೋ ಒಂದು ತರಹ ವಾಸನೆ ಬಡಿಯಿತು. ಕೂಡಲೇ ಶರಭಯ್ಯ ಆ ನೀರನ್ನು ಚೆಲ್ಲಿ, ಲೋಟಾ ಆಕೆಗೆ ಹಿಂತಿರುಗಿಸಿದನು.

"ನಾನಿನ್ನು ಹೊರಡಬೇಕು. ಸಂಗಯ್ಯನನ್ನು ಕಾಣುವುದಾಗಲಿಲ್ಲ. ಆತನು ಬಂದರೆ ನಾನು ಬಂದು ಹೋದೆನೆಂದು ತಿಳಿಸಮ್ಮಾ. ನನ್ನ ಹೆಸರು ಶರಭಯ್ಯ. ಸಂಗಯ್ಯ ಶ್ರೀಮಂತನಾದುದನ್ನು ಕಂಡು ನನಗೆ ಸಂತೋಷವಾಯಿತೆಂದು ಹೇಳು ತಾಯಿ. ಈ ಮನೆಯನ್ನು ಅಚ್ಚುಕಟ್ಟಾಗಿ ಕಟ್ಟಿಸಿರುತ್ತಾನೆ. ಆದರೆ ನನಗೆ ಈ ಬಾಗಿಲೊಂದು ಸರಿಬೀಳಲಿಲ್ಲ. ಈ ವಿಷಯ ಸಂಗಯ್ಯನಿಗೆ ತಿಳಿಸು. ಇರುವ ವಿಚಾರ ಬಚ್ಚಿಡದೆ ಹೇಳಿದುದಕ್ಕೆ ಏನೂ ತಿಳಿದುಕೊಳ್ಳಬೇಡಮ್ಮಾ. ಈ ಬಾಗಿಲು

ಸ್ವಲ್ಪವೂ ಚೆನ್ನಾಗಿಲ್ಲ. ನಾನು ಮರಗೆಲಸವನ್ನು ಬಲ್ಲೆ. ಬಾಗಿಲುಗಳ ವಿಷಯ ಚೆನ್ನಾಗಿ ತಿಳಿದಿದೆ. ಈ ಬಾಗಿಲಿನ ವಿಚಾರವನ್ನು ಸಂಗಯ್ಯ ಗಮನಿಸಿದನೋ ಇಲ್ಲವೋ, ಅದು ಚೆನ್ನಾಗಿಲ್ಲವೆಂದು ನಾನು ತಿಳಿಸಿದುದಾಗಿ ಆತನಿಗೆ ಹೇಳಮ್ಮಾ!" ಎಂದು ಹೇಳಿ ಶರಭಯ್ಯ ತನ್ನ ದಾರಿ ಹಿಡಿದ.

ಅಂದು ಕತ್ತಲಾಗುವ ತನಕ ಸಂಗಯ್ಯ ಮನೆಗೆ ಬರಲಿಲ್ಲ. ಅನಂತರವಷ್ಟೇ ಬಂದ. ಆಗ ತಾನು ಮನೆಯಲ್ಲಿಲ್ಲದ ಸಮಯದಲ್ಲಿ ಶರಭಯ್ಯ ಬಂದುಹೋದ ಸಂಗತಿ ಹೆಂಡತಿಯಿಂದ ತಿಳಿದಕೂಡಲೇ ತುಂಬಾ ನೊಂದುಕೊಂಡು "ಆತನನ್ನು ಉಳಿಸಿಕೊಳ್ಳದೆ ಹೋದೆಯಾ? ಹೊರಟುಹೋಗಲು ಏಕೆ ಅವಕಾಶಕೊಟ್ಟೆ. ಆತ ಏನು ಹೇಳಿದ" ಎಂದು ಹೆಂಡತಿಯನ್ನು ವಿಚಾರಿಸಿದ ಸಂಗಯ್ಯ.

"ನಾವು ಸ್ಥಿತಿವಂತರಾದುದನ್ನು ಕಂಡು ಸಂತೋಷ ವ್ಯಕ್ತಪಡಿಸಿದರು. ಮನೆ ಸೊಗಸಾಗಿದೆ ಎಂದು ಹೊಗಳಿದರು. ಆದರೆ ಒಂದು ವಿಷಯದಲ್ಲಿಮಾತ್ರ ಸರಿಯಾಗಲಿಲ್ಲವಂತೆ. ಅವರಿಗೆ ನಮ್ಮ ಮನೆಯ ಹೊರಬಾಗಿಲು ಹಿಡಿಸಲಿಲ್ಲವಂತೆ. ಏನೇನೂ ಚೆನ್ನಾಗಿಲ್ಲವೆಂದು ಹೇಳಿದರು. ಅವರಿಗೆ ಮರಗೆಲಸ ಬರುವುದಂತೆ. ಬಾಗಿಲು ಒಂದಿಷ್ಟೂ ಚೆನ್ನಾಗಿಲ್ಲವೆಂದು ನಿಮಗೆ ತಿಳಿಸಬೇಕೆಂದು ಒತ್ತಿ ಹೇಳಿದರು" ಎಂದಳು ಸಂಗಯ್ಯನ ಮಡದಿ.

ಸಂಗಯ್ಯನು ಆಶ್ಚರ್ಯಹೊಂದಿ ತನ್ನ ಮನೆಯ ತಲೆಬಾಗಿಲನ್ನು ಬಹಳಹೊತ್ತು



ಸೂಕ್ಷ್ಮವಾಗಿ ಪರೀಕ್ಷಿಸಿದ. ಆತನಿಗೆ ಮನೆಯ ಬಾಗಿಲಲ್ಲಿ ದೋಷವೇನೂ ಕಾಣಿಸಲಿಲ್ಲ.

ಒಂದು ವರ್ಷ ಕಳೆಯಿತು. ಮತ್ತೆ ಬಿಸಿಲು ಕಾಲ ಬಂತು. ಶರಭಯ್ಯ ಮತ್ತೊಮ್ಮೆ ಆ ಗ್ರಾಮಕ್ಕೆ ಬಂದ. ಈ ಸಾರಿಯಾದರೂ ಸಂಗಯ್ಯನನ್ನು ನೋಡಿಕೊಂಡು ಹೋಗೋಣವೆಂದು ಆತನ ಮನೆಗೆ ಹೋಗಿ, ಹೊರಗಿನಿಂದ "ಸಂಗಯ್ಯಾ" ಎಂದು ಕರೆದ.

ಸಂಗಯ್ಯನ ಹೆಂಡತಿ ಬಾಗಿಲನ್ನು ತೆರೆದು ಅಂಗಳಕ್ಕೆ ಬಂದು, ಶರಭಯ್ಯನನ್ನು ನೋಡಿ "ಬನ್ನಿ ಒಳಕ್ಕೆ ಬನ್ನಿ" ಎಂದಳು.

"ಸಂಗಯ್ಯ ಇದ್ದಾನೇನಮ್ಮಾ" ಎಂದು ಶರಭಯ್ಯ ಕೇಳಿದ. "ಇಲ್ಲ ಎಲ್ಲೋ ಹೊರಗೆ ಹೋಗಿದ್ದಾರೆ. ಇನ್ನೇನು ಬರುವ ಸಮಯವಾಯಿತು. ಅಲ್ಲೇಕೆ ನಿಂತಿದ್ದೀರಿ? ಒಳಗಡೆ ಬನ್ನಿ" ಎಂದಳು ಆಕೆ ಮೃದು ಮಧುರವಾಗಿ.

ಸಂಗಯ್ಯನ ಹೆಂಡತಿ ಅಡಿಗೆ ಮನೆಗೆ ಹೋಗಿ ಒಂದು ತಟ್ಟೆಯಲ್ಲಿ ಮೂರು ಲೋಟಾಗಳನ್ನು ತಂದು ಆತನ ಮುಂದಿಟ್ಟಳು. ಒಂದರಲ್ಲಿ ಮಜ್ಜಿಗೆ, ಇನ್ನೊಂದರಲ್ಲಿ ಎಳನೀರು, ಮತ್ತೊಂದರಲ್ಲಿ ತಣ್ಣಗಿರುವ ಸೊಗಸಾದ ಕೂಜಾನೀರು ಇತ್ತು.

"ಇವನ್ನು ತೆಗೆದುಕೊಳ್ಳಿ. ಊಟದ ಹೊತ್ತಿಗೆ ಯಜಮಾನರು ಬರಬಹುದು. ಅಲ್ಲಿಯ ತನಕ ವಿಶ್ರಮಿಸಿಕೊಳ್ಳಿ. ಬಿಸಿಲಿನಲ್ಲಿ ನಡೆದು ಬಂದಿದ್ದೀರಿ" ಎಂದು ಉಪಚರಿಸಿದಳು ಸಂಗಯ್ಯನ ಹೆಂಡತಿ.



“ ಎಲಾ, ಒಂದು ವರ್ಷದಲ್ಲಿ ಸಂಗಯ್ಯನ ಹೆಂಡತಿ ಎಷ್ಟು ಬದಲಾಯಿಸಿದ್ದಾಳೆ!” ಎಂದುಕೊಂಡ ಶರಭಯ್ಯ.

ಕೊಂಚಹೊತ್ತಿಗೆ ಆಕೆ ಮತ್ತೆ ಬಂದು “ಬಹಳ ಹೊತ್ತಾಯಿತು. ಇನ್ನು ನೀವು ಊಟಕ್ಕೇಳಿ” ಎಂದಳು.

“ ಈಗಲೇ ಏನು ಅವಸರ ತಾಯಿ. ಸಂಗಯ್ಯನೂ ಬರಲಿ ” ಎಂದ ಶರಭಯ್ಯ.

“ಅವರ ಹಸಿವು ಅವರಿಗೇ ತಿಳಿಯದು. ಎಷ್ಟು ಹೊತ್ತಿಗೆ ಮನೆಗೆ ಬರುತ್ತಾರೋ ಏನೋ. ಅವರಿಗೋಸ್ಕರ ನೀವು ಊಟ ವಿಲ್ಲದೆ ಹಸಿದುಕೊಂಡಿರುವುದೇಕೆ? ಊಟಕ್ಕೇಳಿ. ಅದರಿಂದೇನೂ ಪರವಾಗಿಲ್ಲ. ಅಡಿಗೆ ಬಿಸಿಯಾಗಿರುವಾಗಲೇ ಊಟಮಾಡುವಿರಂತೆ!” ಎಂದಳು ಸಂಗಯ್ಯನ ಹೆಂಡತಿ. ವಾಸ್ತವವಾಗಿ ಶರಭಯ್ಯನಿಗೆ ತುಂಬಾ ಹಸಿವಾಗಿತ್ತು. ಎದ್ದು ಹೋಗಿ ಊಟಕ್ಕೆ ಕುಳಿತ. ಅಡಿಗೆ ಬಹಳ ರುಚಿಕರವಾಗಿತ್ತು. ಊಟಮುಗಿಸಿ ಮಲಗಿದ ಶರಭಯ್ಯ ಎಚ್ಚರಗೊಂಡಾಗ ಸಾಯಂಕಾಲವಾಗಿತ್ತು.

ಆಗಲೂ ಸಂಗಯ್ಯ ಮನೆಗೆ ಬಂದಿರಲಿಲ್ಲ.

“ಇನ್ನು ನಾನು ಹೊರಡಬೇಕು. ಸಂಗಯ್ಯನನ್ನು ಈ ಬಾರಿಯೂ ನೋಡಲಾಗಲಿಲ್ಲ” ಎಂದ ಶರಭಯ್ಯ.

“ ಹೋಗಬೇಡಿ. ಈ ಸಲವೂ ಅವರನ್ನು ನೋಡದೆ ಹೋಗಿಬಿಟ್ಟರೆ ಅವರು ತುಂಬಾ ನೊಂದುಕೊಳ್ಳುತ್ತಾರೆ. ಒಂದು ಹೊತ್ತು ಇಲ್ಲೇ ಇರಿ. ನಾಳೆ ಹೋಗುವಿರಂತೆ” ಎಂದಳು





ಸಂಗಯ್ಯನ ಹೆಂಡತಿ. "ಇಲ್ಲಮ್ಮಾ, ಹೊತ್ತಾಯಿತು. ಹೋಗಲೇಬೇಕು. ನನ್ನೊಂದಿಗೆ ಕೆಲವಾರು ಜನ ಬಂದಿದ್ದಾರೆ. ಅವರು ನನಗಾಗಿ ಕಾದಿರುತ್ತಾರೆ. ನನಗೇನೋ ಇನ್ನೊಂದು ಹೊತ್ತಿರೋಣವೆಂದಿದೆ. ಆದರೆ ಅದು ಸಾಧ್ಯವಿಲ್ಲ. ನಾನು ಸಂಗಯ್ಯನನ್ನು ಮತ್ತೆಮತ್ತೆ ಕೇಳಿದುದಾಗಿ ಹೇಳು. ನಿಮ್ಮ ಮನೆ, ತೋಟಗಳನ್ನು ನೋಡಿ ನನಗೆ ಆನಂದ ವಾಯಿತೆಂದು ತಿಳಿಸು ತಾಯಿ. ಮುಖ್ಯವಾಗಿ ನಿಮ್ಮ ಬಾಗಿಲನ್ನು ಕಂಡು ನಾನು ತುಂಬಾ ಮೆಚ್ಚಿಕೊಂಡೆನೆಂದು ಹೇಳು. ನನಗೆ ಬಾಗಿಲು ಗಳ ವಿಚಾರ ಚೆನ್ನಾಗಿ ತಿಳಿದಿದೆ. ನಾನು ಬಡಗಿ. ನಿಮ್ಮ ಮನೆಯಲ್ಲಿರುವುದೀಗ ತುಂಬಾ ಒಳ್ಳೆಯ ಬಾಗಿಲು, ಸೊಗುಸಾದ ಬಾಗಿಲು" ಎಂದು ಹೇಳಿ ಶರಭಯ್ಯ ಹೊರಟುಹೋದ.

ಸಂಗಯ್ಯ ಮನೆಗೆ ಬಂದನಂತರ ಅವನ ಹೆಂಡತಿ ಶರಭಯ್ಯ ಬಂದು ಹೋದುದನ್ನೂ ಆತನು ಹೇಳಿದುದನ್ನೂ ತಿಳಿಸಿದಳು. ಎಲ್ಲವನ್ನೂ ಕೇಳಿ ಸಂಗಯ್ಯನು "ಶರಭಯ್ಯ ತುಂಬಾ ಯೋಗ್ಯಮನುಷ್ಯ. ನನ್ನ ಆಪ್ತ ಸ್ನೇಹಿತ. ಬಹಳ ಬುದ್ಧಿವಂತ," ಎಂದ.

"ಆತ ಹೋದಸಲ ಬಂದಿದ್ದಾಗ ನಮ್ಮ ಹೊರಬಾಗಿಲು ಸ್ವಲ್ಪವೂ ಚೆನ್ನಾಗಿಲ್ಲವೆಂದಿದ್ದರು. ಈ ವರ್ಷ ಅದನ್ನೆ ಬಹಳ ಕೊಂಡಾಡಿದರು" ಎಂದಳು ಹೆಂಡತಿ.

"ಕಳೆದ ವರ್ಷ ನಮ್ಮ ಬಾಗಿಲು ಚೆನ್ನಾಗಿಲ್ಲವೆಂದಾಗ ನನಗೇನೂ ಅರ್ಥವಾಗಲಿಲ್ಲ. ಈ ವರ್ಷ ಅದನ್ನು ಮೆಚ್ಚಿಕೊಂಡನೆಂದರೆ ನನಗೆ ಅದರ ಗೂಢಾರ್ಥ ತಿಳಿಯಿತು. ಆತನು ಹಾಗೇಕೆ ಹೇಳಿದನೋ ಬಲ್ಲೆಯಾ? ಹೋದ ವರ್ಷ ಆತನು ಬಂದಿದ್ದಾಗ ನೀನು ಆತನಿಗೆ ಆತಿಥ್ಯವನ್ನು ಕೊಟ್ಟಿರಲಿಲ್ಲ. ಅದರಿಂದ ನಮ್ಮ ಮನೆ ಬಾಗಿಲು ಆತನಿಗೆ ಸರಿಬೀಳಲಿಲ್ಲ. ಈ ಸಲ ವಿಶೇಷ ಮರ್ಯಾದೆಯಿಂದ ವಿಚಾರಿಸಿಕೊಂಡಿರಬೇಕು. ಅಂತಲೇ ಆತನು ಬಾಗಿಲನ್ನು ಮೆಚ್ಚಿಕೊಂಡ" ಎಂದ ಸಂಗಯ್ಯ.

"ಹೌದು. ಆದರೆ ನಾನು ನಿಮ್ಮ ಇಷ್ಟಾನಿಷ್ಟಗಳನ್ನು ಅರಿತು ನಂತರ ಅದರಂತೆ ವರ್ತಿಸಿದ್ದೇನೆ" ಎಂದಳವಳು.





# ಉರುಳಿಗೆ ಸಿಕ್ಕಿದ ಕರಡಿ

ಒಂದು ಸಾರಿ ನರಿಗೆ ತರಕಾರಿ ತೋಟಮಾಡಬೇಕೆಂದು ತೋರಿತು. ಅದು ತನ್ನ ಮನೆಯ ಹತ್ತಿರ ನೆಲವನ್ನು ಅಗೆದು ಕೆಲವು ತರಕಾರಿ ಸಸಿಗಳನ್ನು ನೆಟ್ಟಿತು. ಅವು ಬೆಳೆದು ಕಾಯಿಗಳಾದಾಗ, ಕಾಯಿಗಳು ಮಾಯವಾಗತೊಡಗಿದುವು. ಈ ಕಳ್ಳನನ್ನು ಹಿಡಿಯಲು ನರಿ ಬಹಳ ಪ್ರಯತ್ನಪಟ್ಟಿತು. ಆದರೆ ಕಳ್ಳತನ ಮಾಡುವುದು ಯಾರೆಂದು ತಿಳಿದು ಬರಲಿಲ್ಲ.

ನರಿಯ ತೋಟದಿಂದ ತರಕಾರಿ ಕದಿಯುವುದು ಬೇರೆ ಯಾರೂ ಅಲ್ಲ; ಮೊಲವೇ! ಮೊಲ ಅತ್ಯಂತ ಜಾಗರೂಕತೆಯಿಂದ ಕಳ್ಳತನ ಮಾಡುವುದರಿಂದಲೇ ನರಿಗೆ ಕಳ್ಳನ ಜಾಡೆ ತಿಳಿಯಲಿಲ್ಲ.

ಕಟ್ಟಕಡೆಗೆ ನರಿ ಕಳ್ಳ ಬರುವ ಮಾರ್ಗವನ್ನು ಕಂಡು ಹಿಡಿಯಿತು. ತೋಟದ ಸುತ್ತೂ ಹಾಕಿದ ಬೇಲಿಯ ಒಂದು ಮೂಲೆಯಲ್ಲಿ ಒಂದು ಬಿಲವಿತ್ತು. ಈ ಬಿಲದ ಮಾರ್ಗದಲ್ಲೇ ಕಳ್ಳ ಬರುತ್ತಿರಬೇಕು. ಹೀಗೆ ತಿಳಿದು ನರಿ ಕಳ್ಳನನ್ನು ಹಿಡಿಯಲು ಒಂದು ಉಪಾಯಮಾಡಿತು. ಏನೆಂದರೆ, ಬೇಲಿಯ ಹಿಂಬದಿಯಲ್ಲಿ ಬೆಳೆದ ಬಿದಿರುಗಳಲ್ಲಿ ಒಂದರ ಕೊನೆಗೆ ಒಂದು ಹಗ್ಗವನ್ನು ಕಟ್ಟಿತು. ಬಳಿಕ ಆ ಬಿದಿರನ್ನು ಬಾಗಿಸಿ ಹಗ್ಗದ ಉರುಳು ಬಿಲದ ಬಾಯಿಗೆ ಸರಿಯಾಗಿರುವಂತೆ ಮಾಡಿತು. ಯಾವ ಪ್ರಾಣಿಯಾದರೂ ಬಿಲದೊಳಗೆ ಕಾಲಿಡುತ್ತಲೇ, ಬಿದಿರು ಮೇಲಕ್ಕೇಳುವ ಹಾಗೆ ಬೋನು ರಚಿಸಿ ನರಿ ತನ್ನ ಮನೆಗೆ ಹೋಯಿತು.

ಆ ರಾತ್ರಿ ಮೊಲ ಬಂದು ಬಿಲದೊಳಗೆ ಕಾಲು ತೂರಿಸುತ್ತಲೇ ಮೊಲದ ನಡುಭಾಗಕ್ಕೆ ಉರುಳು ಸಿಕ್ಕಿಕೊಂಡಿತು. ಕೊಡಲೇ ಬಿದಿರು ಮೇಲಕ್ಕೆದ್ದು, ಮೊಲ—ಪಾಪ!—ಭೂಮಿಗೆ ಅಷ್ಟೆತ್ತರದಲ್ಲಿ ಗಾಳಿಯಲ್ಲಿ ನೇತಾಡುತಿತ್ತು!

ಮೊಲಕ್ಕೆ ಏನು ಮಾಡಬೇಕೆಂದು ತೋರಲಿಲ್ಲ. ಯಾರಾದರೂ ಬಂದು ತನ್ನನ್ನು ರಕ್ಷಿಸಲಾರರೇ ಎಂದು ಆಚೆಗೆ ಈಚೆಗೆ ನೋಡಿತು. ಆಗೊಂದು ಕರಡಿ ಜೇನು ಹುಡುಕುತ್ತಾ

ಎಸ್. ನಂಜುಂಡಯ್ಯ



ರಾಜ ಗಂಭೀರವಾಗಿ ಅಲ್ಲಿಗೆ ಬಂತು. "ಓಕರಡ್ಯಣ್ಣಾ!" ಎಂದು ಮೊಲ ಕೂಗಿ ಕರೆಯಿತು. ಕರಡಿ ತಲೆಯೆತ್ತಿ ನೋಡಿ— "ಎಲೇ! ಅಲ್ಲೇನು ಮಾಡುತ್ತಾ ಇರುವಿಯಾ?" ಎಂದಿತು ಆಶ್ಚರ್ಯದಿಂದ.

"ನರಿಯ ತೋಟಕ್ಕೆ ಕಾವಲು ಕಾಯುತಿದ್ದೇನೆ. ಬೆಳ ತನಕ ಕಾದರೆ ಒಂದು ರೂಪಾಯಿಕೊಡುತ್ತಾನೆ ನರಿಯಣ್ಣ. ಆದರೆ ಈಗೇನು ತೊಂದರೆ ಬಂತೆಂದರೆ, ಕಳ್ಳರು ನನ್ನನ್ನು ನೋಡಿ ಹೆದರುವುದಿಲ್ಲ. ನಿನ್ನಂಥ ಗಾಂಭೀರ್ಯ ನನಗಿಲ್ಲ. ರೂಪಾಯಿ ಆಶೆಗೇನೋ ಒಪ್ಪಿಕೊಂಡೆ. ಹೋಗಲಿ, ನೀನಾದರೂ ಮಾಡುವೆಯಾ? ಮಕ್ಕಳು ಮರಿ ಇದ್ದವ" ಎಂದಿತು ಮೊಲ.

ಕರಡಿಗೆ ಆಶೆಹುಟ್ಟಿತು. ಅದು ಬಿದಿರನ್ನು ಬಾಗಿಸಿ ಮೊಲವನ್ನು ಉರುಳಿನಿಂದ ಬಿಡಿಸಿ, ತನ್ನನ್ನು ಅದರೊಳಗೆ ಸಿಕ್ಕಿಸಿಕೊಂಡಿತು.

ಮೊಲ ಕೂಡಲೇ ಓಡಿಹೋಗಿ ನರಿಯನ್ನು ಎಬ್ಬಿಸಿ—"ನರಿ ಬಾವ! ಬೇಗ ಬಾ ನೋಡು! ಕಳ್ಳ ಉರುಳಿಗೆ ಸಿಕ್ಕಿಬಿದ್ದ." ಎಂದು ಕರೆಯಿತು. ನರಿ ದೊಣ್ಣೆ ತೆಗೆದುಕೊಂಡು ಹೋಗಿ, ಕರಡಿಯನ್ನು ನೋಡಿ "ನಿನಗಿದೇನು ರೋಗ! ಆಂ?" ಎಂದು ಗದರಿಸಿತು.

ಕರಡಿ ಏನೋ ಹೇಳಲೆತ್ನಿಸಿದಾಗ—"ಅದರ ಬಾಯಿಗೆ ಹೊಡಿ!" ಎಂದಿತು ಮೊಲ. ನರಿ ಕರಡಿಯ ಬಾಯಿಮೇಲೆ ಹೊಡೆಯ ತೊಡಗಿತು. ಕೂಡಲೇ ಮೊಲ ಓಡಿಹೋಗಿ ದಾರಿಯಲ್ಲಿದ್ದೊಂದು ಕೆರೆಯಲ್ಲಿ ಮೂಗಿನ ತನಕ ಮುಳುಗಿ ಕುಳಿತುಕೊಂಡಿತು.

ಸ್ವಲ್ಪಹೊತ್ತಿನಲ್ಲಿ ಕರಡಿ ನಡೆದ ಸಂಗತಿಯೆಲ್ಲಾ ನರಿಗೆ ಹೇಳಿ, ಉರುಳಿನೊಳಗಿಂದ ಬಿಡುಗಡೆಹೊಂದಿ, ಮೊಲವನ್ನು ಹುಡುಕುತ್ತಾ ಹೊರಟಿತು. ಅದು ಆ ಕೆರೆಯ ಬಳಿಗೆ ಬಂದು ಮೊಲದ ತಲೆಯನ್ನು ನೋಡಿ, ಗೊಂಗುರು ಕಪ್ಪೆ ಯೆಂದುಕೊಂಡು—"ಏ ಗೊಂಗುರುಗಪ್ಪೆ! ಈ ದಾರಿಯಾಗಿ ಮೊಲ ಬಂತೆ?" ಎಂದು ಕೇಳಿತು. "ಬಂತು ಆಚೆ ಕಡೆ ಓಡಿತು" ಎಂದು ಮೊಲ ಕರಡಿಯನ್ನು ತಪ್ಪುದಾರಿ ಹಿಡಿಸಿತು. ನಂತರ ಮೊಲ ನಿಶ್ಚಿಂತೆಯಾಗಿ ತನ್ನ ಮನೆಗೆ ಹೋಯಿತು.






ಬಿಲದೊಳಗಿ ನಿಂದಲೇ
ಕಾಗೆಯನು ನೋಡಿ
ಕೇಳಿತಾರೆಂದು ಇಲಿ
ಸಂಶಯದಿ ಕೂಡಿ
"ಅಯ್ಯ ಓ, ಅಣ್ಣಯ್ಯ!
ಕಿರಿದಾದ ನಿನ್ನ
ಹಿರಿಯಗುಣವದು ತುಂಬ
ಮೆಚ್ಚಿಸಿತು ಎನ್ನ.
ಸ್ನೇಹವನು ಬಯಸಿನಾ
ಬಂದೆನೋ ಗೆಳೆಯ!"
ಎಂದು ಕಾಗೆಯು ಹೊರಗೆ
ಕರೆಯಿತಾ ಇಲಿಯ
ಇಲಿಯೆಂದಿ "ತಬ್ಬಬ್ಬ!
ನಮಗೆಲ್ಲಿ ಸ್ನೇಹ?
ತಿನುವಾತ ನೀನೆಮ್ಮ;
ಕವಿಸುವೆಯ ಮೋಹ?
ತಕ್ಕವರ ಜತೆಗೆ ಸ್ನೇ
ಹವ ಮಾಡ ಬೇಕು.
ಹಗೆಗಳನು ಕಂಡಾಗ
ದೂರವಿರ ಬೇಕು.
ಎಷ್ಟೆಂದರೂ ನಿನ್ನ
ಭಾವವಿದು ಕ್ಷಣಿಕವೇ!
ಎಷ್ಟು ಕುದಿದರು ನೀರು
ಬೆಂಕಿಗಂತಕವೇ!"
ಲಘುಪತನಕವು ನುಡಿಯಿ
"ತಿಂತೆನ್ನ ಬೇಡ
ನೋಡದಲೆ ಸಂಶಯದಿ
ಎನ್ನ ಕೊಲಬೇಡ!"
ನುಡಿಯಿತು ಹಿರಣ್ಯಕವು:
"ಇದು ಹಗೆಯನಂಟು!
ಹುಟ್ಟುಹಗೆ, ತೊಟ್ಟುಹಗೆ
ಹಗೆಗಳೆರಡುಂಟು.
ಎಂದಿಗೂ ಹಗೆ ತೀರ್ಪ
ಸಂಧಿ ಬಿಡರಾರೂ!
ಹಾವ್ - ಮುಂಗುಸಿಗಳೆಂತು
ಸ್ನೇಹವಾದಾರು?

ಮಾರಂಗ



ಎಣ್ಣೆಗೂ - ಸೀಗೆಗೂ
ಬೆಂಕಿ ನೀರ್‌ಗಳಿಗೂ,
ಸಿಂಹಕೂ ಆನೆಗೂ,
ನಾಯ್ - ಬೆಕ್ಕುಗಳಿಗೂ,
ಎಂದಿಗೂ ಸ್ನೇಹ ಕುದು
ರದು, ಹೋಗು ದೂರ!"
ಒಡನೆ ನುಡಿಯಿತು ಕಾಗೆ:
"ಓ ಗುಣಾಕಾರ!
ಸಹಜ ನೀನೆಂದರೂ
ಈಗ ಹಾಗಲ್ಲ;
ಕಾರಣವು ಇಲ್ಲದೆಯೆ
ಹಗೆ ಬರುವುದಿಲ್ಲ.
ನಿನ್ನ ಕಟ್ಟಳೆಗೆಲ್ಲ
ಒಪ್ಪುವೆನು ನಾನು.
ಗುಣಕೆ ಮೆಚ್ಚಿದೆ ಹೊರತು
ಕಪಟವಿಲ್ಲೇನೂ.
ಬಾ ಮಿತ್ರ, ಸ್ನೇಹದ ಪ್ರ
ಮಾಣ ಮಾಡೋಣ.
ನಿನ್ನ ಕಟ್ಟೆಗೆ ಬದ್ಧ
ನಾನ್, ಹಿಡಿ ಪ್ರಮಾಣ!"
ಇಲಿಯೆಂದಿ: "ತಾನೆಗೇನ್ -
ಇಂದ್ರ ನಂತಹನೂ,
ಆಣೆ ಮುರಿದಾಕಥೆಯ
ತುಂಬ ಕೇಳಿಹೆನು.
ಸಂದು ದೊರೆತಾಗ ಹಿತ
ನೆಂಬುದನು ಮರೆತು
ಕೊಲ್ಲುವುದ ಬಲ್ಲೆನೈ,
ಬಿಡು ಇಂಥ ಮಾತು!"
ಕಾಗೆ ದುಗುಡದಿ ಪೇಳಿ
"ತಯ್ಯದಯ ಮಾಡು!
ನಂಬೆನ್ನ, ಕೋರಿಕೆಗೆ
ಮನ್ನಣೆಯ ನೀಡು.
ಏಳು ಮಾತುಗಳಲ್ಲಿ,
ಏಳಡಿಗಳಲ್ಲಿ,
ಸ್ನೇಹವಾಗುವುದಂತೆ;
ನಮಗೆ ಈಗಿಲ್ಲಿ
ಇಷ್ಟು ಹೊತ್ತಿಷ್ಟು ಸಂ
ಭಾಷಣೆಗಳಾಗಿ,

ಸ್ನೇಹವಿಲ್ಲೆಂದರೇನ್?
ಬಾರೊ ಸಖನಾಗಿ!
ನಂಬದಿರೆ, ಬಿಡು ನಾನು
ದೂರವೇ ಇರುತ,
ಪ್ರೀತಿಯಲಿ ಸುಗುಣಗಳ
ಬೆಳೆಸೋಣ ನಿರುತ.''
ಇಲಿನುಡಿಯಿ "ತಿಷ್ಟು
ಕೋರುವೆ, ಶತ್ರು ನೀನು.
ಬಿಲಕೆ ಬಾರದೆ ಸಮೀ
ಪಿಸದಿರುವಿಯೇನು?''
"ಆಗ ಬಹುದೆ"ಂದು ನುಡಿ
ಯಿತು ಕಾಗೆ ಒಡನೆ;
ಸತ್ಸಂಗದಾನಂದ
ತುಂಬಿದೆದೆ ಯೊಡನೆ.
ಅಂದಿನಿಂದವು ಅಡಿಗ
ಡಿಗೆ ಸಂಧಿ ಸುತ್ತಿಹವು;
ಆನಂದದಿಂದ ಸ
ಲ್ಲಾಪ ಮಾಡುತ್ತಿಹವು.
ಕಾಗೆ ಏನಾದರೂ
ತಿಂಡಿ ಬಿಲಕೆಸೆಯುವುದು;
ಮೂಷಿಕವು ರುಚಿಯಾದ
ತಿಂಡಿ ಹೊರದೂಡುವುದು,
ಇದ್ದುದನು ಕೊಡುವ, ಕೊ
ಟ್ಟುದ ಬಿಡದೆ ಕೊಳುವ,
ಗುಟ್ಟುಗಳನುಡಿವ, ನುಡಿ




ವಾಗುಟ್ಟ ನಾಲಿಸುವ
ತಿನ್ನಲೀಯುವ, ಇತ್ತು
ದನು ಬಿಡದೆ ತಿನುವ,
ಇಂತು ಸ್ನೇಹವ ಬೆಳೆಸು
ವಾರು ಗುಣ ಗಣವ
ಅನುಸರಿಸುತಿರೆ ಸ್ನೇಹ
ಸಬಲವಾಗುವುದು.
ಸಂಧಿಸುವುದೇ ಬಿಡಲು
ಸ್ನೇಹ ಮರೆಯುವುದು.
ಲಘುಪತನಕವು ಹಿರ
ಣ್ಯಕವೆರಡು ಕಲೆತು,
ಕ್ರಮವಾಗಿ ಬಿಗಿಯ ಸ್ನೇ
ಹಿತರಾದ ರೊಳಿತು.

# ಮಾಂಡವ್ಯನ ತಪಸ್ಸು

**ಬೇ**ಸರಗೊಳ್ಳದ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಶವವನ್ನು ಕೆಳಕ್ಕಿಳಿಸಿ ಭುಜದ ಮೇಲೆ ಹಾಕಿಕೊಂಡು ಮೌನವಾಗಿ ಶ್ಮಶಾನದಕಡೆ ನಡೆಯಲಾರಂಭಿಸಿದನು. ಆಗ ಶವದಲ್ಲಿದ್ದ ಬೇತಾಳ 'ರಾಜನೇ, ನಿನ್ನ ದೃಢಚಿತ್ತವನ್ನು ಮೆಚ್ಚಿಕೊಳ್ಳುತ್ತೇನೆ. ಆದರೂ ಕೊನೆಗೆ ನಿನ್ನ ದೀಕ್ಷೆಯನ್ನು ಬದಿಗೊತ್ತಿ ಮಾಂಡವ್ಯನಂತಾಗುವೆಯೋನೋ ಎಂದು ಸಂದೇಹವಾಗಿದೆ. ನಿನಗೆ ದಾರಿಕಳೆಯಲೆಂದು ಆತನ ಕಥೆಯನ್ನು ಹೇಳುವೆನು ಲಾಲಿಸು " ಎಂದು ಈ ರೀತಿಯಾಗಿ ಹೇಳಲಾರಂಭಿಸಿತು.

ಬಹಳಕಾಲದ ಹಿಂದೆ ನೈಮಿಶಾರಣ್ಯದಲ್ಲಿ ಮಾಂಡವ್ಯನೆಂಬ ಒಬ್ಬ ಮಹಾಮುನಿ ಯಿದ್ದನು. ಆತನಿಗೆ ಈ ಪ್ರಪಂಚದಲ್ಲಿ ಮೋಸ, ಕಪಟ, ವಂಚನೆ, ಮೂರ್ಖತೆಗಳ ಹೊರತು ಮತ್ತೇನೂ ಇರುವಂತೆ ತೋರಲಿಲ್ಲ. ಇಂದು ಮುಗ್ಧರಾಗಿದ್ದ ಮಕ್ಕಳು ನಾಳೆ ದೊಡ್ಡವರಾಗಿ ಅನೇಕ ಹೊಲಸುಕಾರ್ಯಗಳನ್ನು, ಪಾತಕಕಾರ್ಯ



ಗಳನ್ನು ಮಾಡುವರು. ಇದನ್ನೆಲ್ಲಾ ನೋಡಿ ಆತನಿಗೆ ಸೃಷ್ಟಿಯಮೇಲೆ ಒಂದು ವಿಧವಾದ ಅಸಹ್ಯ ಭಾವನೆ ಜನಿಸಿತು. ಸೃಷ್ಟಿಕರ್ತನಾದ ಈಶ್ವರನಮೇಲೆ ಆಗ್ರಹವುಂಟಾಯಿತು. ಆದ ರಿಂದ ಆತನು ಪ್ರಪಂಚವನ್ನೇ ನಿರ್ಮೂಲ ಗೊಳಿಸಲು ಶಿವನನ್ನು ಕುರಿತು ಉಗ್ರತಪ ಸ್ಸನ್ನು ಆಚರಿಸಿದನು.

ಮಾಂಡವ್ಯನು ನೈಮಿಶಾರಣ್ಯದಲ್ಲಿ ಒಂದು ನಿರ್ಜನ ಪ್ರದೇಶದಲ್ಲಿ ಒಂಟಿಕಾಲಿನ ಮೇಲೆ ನಿಂತು ಕೈಗಳನ್ನು ಮೇಲಕ್ಕೆತ್ತಿ ಪದ್ಮದಂತೆ ಜೋಡಿಸಿ ನಿಶ್ಚಲ ಸಮಾಧಿಯಲ್ಲಿ ಅತಿಕಠೋರ ವಾದ ತಪಸ್ಸನ್ನು ಮಾಡಲಾರಂಭಿಸಿದನು. "ಪರಮೇಶ್ವರ, ನೀನು ಈ ಸೃಷ್ಟಿಯನ್ನು ಲಯಗೊಳಿಸುವವರೆವಿಗೂ ನಾನು ಚಲಿಸದೆ ಇದೇರೀತಿ ತಪಸ್ಸು ಮಾಡುತ್ತಿರುವೆನು" ಎಂದು ಮನಸ್ಸಿನಲ್ಲೇ ಅಂದುಕೊಂಡ.

ಕೊಂಚಕಾಲ ಕಳೆಯಿತು. ಮಾಂಡವ್ಯನ ತಪಶ್ಶಕ್ತಿಗೆ ಪಂಚಭೂತಗಳು ಚಲಿಸಲಾರಂಭಿಸಿದುವು. ಭೂಮಿ ಕಂಪಿಸಿತು. ಸಮುದ್ರದ ಮೇಲೆ ಬಿರುಗಾಳಿ ಎದ್ದಿತು. ಅಗ್ನಿಪರ್ವತ ಗಳು ಅಗ್ನಿಕಾರಿದುವು. ದಂಡಕಾರಣ್ಯದಲ್ಲಿ ಪ್ರಳಯಮಾರುತವೆದ್ದು ಮಹಾವೃಕ್ಷಗಳು ಬೇರು ಸಹಿತ ಕೆಳಗುರುಳಿದುವು. ಪ್ರಪಂಚ ಇಷ್ಟೊಂದು ಕ್ಷೋಭಿತಗೊಂಡಿದ್ದರೂ ಮಾಂಡ ವ್ಯನು ಚಲಿಸಲಿಲ್ಲ. ತನ್ನ ತಪಸ್ಸು ಫಲಿಸಿ ಪ್ರಪಂಚಲಯ ಹೊಂದುವುದೆಂದು ಆತನಿಗೆ ಮತ್ತಷ್ಟು ಉತ್ಸಾಹವೂ ಹುಮ್ಮಸ್ಸೂ ಬಂತು.



ಈ ಸಮಯದಲ್ಲಿ ಎರಡು ಗುಬ್ಬಚ್ಚಿಗಳು ಒಂದು ಚಿಕ್ಕ ಪೊದೆಯಲ್ಲಿ ಗೂಡನ್ನು ಕಟ್ಟಲು ಪ್ರಯತ್ನಿಸಿದುವು. ಹೆಣ್ಣುಪಕ್ಷಿ ಮೊಟ್ಟೆ ಯಿಡಲು ಸಿದ್ಧವಾಗಿತ್ತು. ಬೇಗ ಗೂಡು ಕಟ್ಟಿ ಅದರಲ್ಲಿ ಮೊಟ್ಟೆಯಿಟ್ಟು ಶಾಖಕೊಟ್ಟು ಮರಿಗಳನ್ನು ಮಾಡಬೇಕು. ಆದರೆ ಗೂಡು ಕಟ್ಟಲು ಅವು ಮಾಡಿದ ಪ್ರಯತ್ನಗಳು ಫಲಿಸ ಲಿಲ್ಲ. ಗಾಳಿಯ ದೆಸೆಯಿಂದ ಪೊದೆಯಲ್ಲಿ ಗೂಡು ನಿಲ್ಲುತ್ತಿರಲಿಲ್ಲ. ಅದಕ್ಕಿಂತಲೂ ಉತ್ತಮಸ್ಥಳ ಸಿಗುವುದೇನೋ ಎಂದು ಅವು ಸುತ್ತಲೂ ನೋಡಿದುವು. ಪದ್ಮದಂತೆ ತೆರೆ ದಿದ್ದ ಮಾಂಡವ್ಯನ ಕರಗಳು ಅವುಗಳ ದೃಷ್ಟಿಗೆ ಬಿದ್ದುವು. ಮಹಾವೃಕ್ಷಗಳು ಗಾಳಿಗೆ ಅತ್ತಿತ್ತ ಅಲುಗಾಡುತ್ತಿದ್ದರೂ ಆತನ ಕೈಗಳುಮಾತ್ರ

ನಿಶ್ಚಲವಾಗಿ ಹಾಗೆಯೆ ಅಲುಗದೆ ನಿಂತಿದ್ದುವು. ಆ ಎರಡು ಪಕ್ಷಿಗಳು ಧೈರ್ಯವಾಗಿ ಆತನ ಕೈಗಳಲ್ಲಿ ತಮ್ಮ ಗೂಡನ್ನು ಕಟ್ಟಿಕೊಂಡವು. ಆ ಗೂಡಿನಲ್ಲಿ ಹೆಣ್ಣುಪಕ್ಷಿ ನಾಲ್ಕು ಮೊಟ್ಟೆಗಳನ್ನಿಟ್ಟು ಅದನ್ನು ಮರಿಮಾಡಿತು. ಹೆಣ್ಣು ಪಕ್ಷಿ, ಗಂಡುಪಕ್ಷಿ ಒಂದಾದನಂತರ ಒಂದು ಹಾರಿಹೋಗಿ ಮರಿಗಳಿಗೆ ಆಹಾರ ತಂದು ಕೊಡುತ್ತಿದ್ದುವು. ಕ್ರಮೇಣ ಮರಿಗಳು ಬೆಳೆದು ದೊಡ್ಡವಾಗುತಿದ್ದುವು.

ಇದನ್ನೆಲ್ಲಾ ಮಾಂಡವ್ಯನು ಗಮನಿಸುತ್ತಲೇ ಇದ್ದ. ತನಗೆ ಶರಣು ಬಂದ ಪಕ್ಷಿಗಳ ಮೇಲೆ, ಅವುಗಳ ಮರಿಗಳಮೇಲೆ ಆತನಿಗೆ ಒಂದು ವಿಚಿತ್ರವಾದ ಮಮಕಾರವುಂಟಾಯಿತು. ಒಂದು ದಿನ ಒಂದು ಗಿಡುಗ ರೊಯ್ಯನೆ ಗೂಡಿನಕಡೆ ಬರುತ್ತಿರುವುದನ್ನು ಕಂಡು ಆತನು ಕೈಗಳನ್ನು ಕೆಳಗಿಳಿಸಿ ಪಕ್ಷಿಯ ಗೂಡನ್ನು ತನ್ನ ಎದಗವಚಿಕೊಂಡನು.

ಅಂದಿನಿಂದ ಆತನು ಆಗಾಗ ಕೈಗಳನ್ನು ಕೆಳಗಿಳಿಸಿ ಆ ಮರಿಪಕ್ಷಿಗಳ ಬೆಣವಣಿಗೆಯಲ್ಲಿ ಆಸಕ್ತಿ ತೋರಿಸುತ್ತಿದ್ದನು. ಪಕ್ಷಿಗಳು ತಿಳಿಗೇಡಿತನದಿಂದ ವರ್ತಿಸಿದಾಗ ತನ್ನೊಳಗೆ ತಾನೇ ಕಿರುನಗೆ ನಗುವನು.

ಮರಿಗಳು ದೊಡ್ಡವಾದುವು. ಅವುಗಳಿಗೆ ರೆಕ್ಕಗಳು ಬಂದುವು. ಗೂಡುಬಿಟ್ಟು ಹಾರಾಡುವ ಸಮಯ ಬಂತು. ಗಂಡುಪಕ್ಷಿ ಗೂಡಿನ ಸುತ್ತಲೂ ಹಾರುತ್ತಾ "ನೀವೂ ಸಹ ನನ್ನ ಹಾಗೇ ಹಾರಿ" ಎಂಬಂತೆ ಪ್ರೋತ್ಸಾಹಿಸುತಿತ್ತು. ಮರಿಗಳು ಒಂದೆರಡು ಸಾರಿ ರೆಕ್ಕೆ



ಗಳನ್ನು ಬಡಿದುವು. ಆದರೆ ಹಾರಲು ಹೆದರಿದುವು. ಹೆಣ್ಣುಪಕ್ಷಿ ಅವುಗಳನ್ನು ಗೂಡಿನಿಂದ ಮೆಲ್ಲನೆ ಹೊರಗೆ ತಳ್ಳಲು ಯತ್ನಿಸಿತು. ಮರಿಗಳು ಮತ್ತಿಷ್ಟು ಬೆದರಿದುವು. ಈಗ ಹೆಣ್ಣು ಮತ್ತು ಗಂಡುಪಕ್ಷಿಗಳೆರಡೂ ಗೂಡಿನ ಸುತ್ತಲೂ ಹಾರಿದುವು. ಆದರೂ ಏನೊಂದೂ ಲಾಭವಿಲ್ಲದಾಯಿತು.

ಆಗ ಮಾಂಡವ್ಯನು ಈ ವಿಷಯದಲ್ಲಿ ತಲೆ ಹಾಕಿದನು. ಆತನು ಪಕ್ಷಿಯ ಗೂಡನ್ನು ಒಂದು ಕೈಯಲ್ಲಿ ಹಿಡಿದುಕೊಂಡು, ಎರಡನೇ ಕೈಬೆರಳಿನಿಂದ ಒಂದೊಂದೇ ಮರಿಯನ್ನು ಮೆಲ್ಲನೆ ಗೂಡಿನಿಂದ ಹೊರಗೆ ತಳ್ಳಲಾರಂಭಿಸಿದನು. ಒಂದೊಂದು ಮರಿಯಾಗಿ ಕೆಳಗೆ ಬಿದ್ದು, ಮರುಕ್ಷಣವೇ ಗಾಬರಿಯಿಂದ ರೆಕ್ಕ ಬಡಿಯುತ್ತಿದ್ದುವು. ಕೂಡಲೇ ಅವಕ್ಕೆ ಹಾರಲು ಸಾಧ್ಯವಾಗುತಿತ್ತು. ಈ ರೀತಿ ಆ ನಾಲ್ಕು ಮರಿಗಳು ಹಾರುವುದನ್ನು ಕಲಿತವು.

ಮಾಂಡವ್ಯನು ಹರ್ಷಿತಗೊಂಡನು. ಹುಚ್ಚು ಪ್ರಾಣಿಗಳು, ಅಸಹಾಯ ಜೀವಿಗಳು, ಬಾಯಿಯಿಲ್ಲದ ಪಕ್ಷಿಗಳು' ಎಂದುಕೊಂಡ ಆತ. ಆ ಗುಬ್ಬಚ್ಚಿಯ ಕುಟುಂಬವನ್ನು ನೆನೆನೆನೆದು ಆತನ ಹೃದಯ ಪ್ರೇಮ ಮತ್ತು ಮರುಕದಿಂದ ತುಂಬಿಹೋಯಿತು.

ಇಷ್ಟರಲ್ಲಿ ಆತನಿಗೆ ತನ್ನ ತಪಸ್ಸಿನ ಮಾತು ಜ್ಞಾಪಕಕ್ಕೆ ಬಂತು. ಆತನು ಸುತ್ತಲೂ ನೋಡಿದನು. ಬಿರುಗಾಳಿ ನಿಂತುಹೋಗಿತ್ತು. ಮುರಿದುಬಿದ್ದಿದ್ದ ಮರಗಳು ಚಿಗುರಲಾರಂಭಿಸಿದುವು. ಈಶ್ವರನು ತನ್ನ ಕೋರಿಕೆಯನ್ನು





ನೆರವೇರಿಸಲಿಲ್ಲವೆಂದು ಮಾಂಡವ್ಯನು ಅರಿತನು. ಆದರೆ ಆತನಿಗೆ ಆಶಾಭಂಗವಾಗಲಿಲ್ಲ. ಒಂದು ಸಾರಿ ಆಕಾಶದತ್ತ ನೋಡಿ ಕಿರುನಗೆ ಬೀರಿ "ಪರಮೇಶ್ವರಾ, ನೀನು ಈ ಪ್ರಪಂಚವನ್ನು ಏಕೆ ಲಯಗೊಳಿಸಲಿಲ್ಲವೋ ನನಗರ್ಥವಾಯಿತು. ನಿನ್ನಿಷ್ಟಪ್ರಕಾರವೇ ನಡೆಯಲಿ" ಎಂದು ತನ್ನ ಆಶ್ರಮಕ್ಕೆ ಹಿಂತಿರುಗಿ ಎಂದಿನಂತೆ ಆಶ್ರಮವಾಸವನ್ನು ಸಾಗಿಸುತ್ತಿದ್ದನು.

ಬೇತಾಳ ಈ ಕಥೆ ಹೇಳಿ "ರಾಜನೇ, ಮಾಂಡವ್ಯನ ತಪಸ್ಸು ಭಂಗವಾಗಲು ನಿಜವಾದ ಕಾರಣ ಯಾವುದು? ಸಮಾಧಿಯಲ್ಲಿದ್ದು ಕೈ ಕದಲಿಸಿದುದರಿಂದಲೇ ಅಥವಾ ಗುಬ್ಬಚ್ಚಿಗಳಮೇಲೆ ಗಮನ ಕೊಟ್ಟಿದ್ದುದರಿಂದಲೇ? ಆತನು ಅರ್ಥ ಮಾಡಿಕೊಂಡುದೇನು? ಈಶ್ವರನು ಪ್ರಪಂಚವನ್ನು ಲಯವೇಕೆ ಮಾಡಲಿಲ್ಲ? ಈ ಪ್ರಶ್ನೆಗಳಿಗೆ ಉತ್ತರ ತಿಳಿದೂ ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳುಗಳಾದೀತು ಹುಷಾರ್" ಎಂದಿತು.

ಗುಬ್ಬಚ್ಚಿಗಳ ಮೂಲಕ ಮಾಂಡವ್ಯನ ತಪಸ್ಸು ಭಂಗವಾಯಿತು. ಆತನಿಗೆ ಅವುಗಳ ಮೇಲೆ ಮಮತೆಯುಂಟಾದ ಕ್ಷಣದಿಂದ ಆತನು ತಪಸ್ಸುಮಾಡುವುದನ್ನು ನಿಲ್ಲಿಸಿದ. ಮಾನವ ಮಾತ್ರನಾದ ಮಾಂಡವ್ಯನಿಗೇ ದಿಕ್ಕಿಲ್ಲದ ಪಕ್ಷಿಗಳಮೇಲೆ ಪ್ರೇಮ, ಕರುಣೆಗಳಿದ್ದರೆ, ಪರಮೇಶ್ವರನಿಗೆ ಪ್ರಾಣಿಕೋಟಿಯ ಮೇಲೆಷ್ಟು ಪ್ರೇಮ, ಕರುಣೆಗಳಿರಬೇಕೋ ಊಹಿಸು. ತನ್ನಂತೆಯೇ ಈಶ್ವರನೂ ಈ ಪ್ರಪಂಚದ ರೀತಿ ನೀತಿಗಳನ್ನು ನೋಡಿ ಬೇಸರಪಟ್ಟಿರಬಹುದೆಂದು ಭಾವಿಸಿ ಮಾಂಡವ್ಯನು ತಪಸ್ಸನ್ನು ಪ್ರಾರಂಭಿಸಿ ಪ್ರಪಂಚವನ್ನು ಲಯಗೊಳಿಸಬಹುದೆಂದುಕೊಂಡನು. ಆದರೆ ಈಶ್ವರನಿಗೆ ಪ್ರಾಣಿಕೋಟಿಯ ಮೂರ್ಖತೆ, ಪಾಪಗಳನ್ನು ಸಹಿಸುವ ಶಕ್ತಿಯಿದೆಯೆಂದು ತಿಳಿದುಕೊಂಡ ಕೂಡಲೇ ಆತನ ಮನಸ್ಸು ಬದಲಾಯಿಸಿತು" ಎಂದು ತ್ರಿವಿಕ್ರಮನು ಉತ್ತರ ನುಡಿದನು.

ರಾಜನಿಗೆ ಈ ವಿಧವಾಗಿ ಮೌನಭಂಗವಾದಕೂಡಲೇ ಬೇತಾಳ ಶವದೊಂದಿಗೆ ಮಾಯವಾಗಿ, ಮೊದಲಿನಂತೆ ಆ ಮರದ ಕೊಂಬೆಯಮೇಲೆ ನೇತಾಡಿತು.






## 5

[ಅನೇಕ ಕಷ್ಟಗಳನ್ನು ಅನುಭವಿಸಿಕೊಂಡು ರೂಪಧರನು ಸುಕೇಶಿನಿ ಎಂಬ ದೇವತೆಯಿರುವ ದ್ವೀಪವನ್ನು ಸೇರಿಕೊಂಡನು. ತನ್ನ ತಂಡವನ್ನು ಇಬ್ಭಾಗವಾಗಿ ಮಾಡಿ ಮಾಯಾವಿ ಎಂಬುವನ ನಾಯಕತ್ವದಲ್ಲಿ ಒಂದು ತಂಡವನ್ನು ದ್ವೀಪದಲ್ಲಿರುವವರ ಆಚಾರ ವಿಚಾರಗಳನ್ನು ತಿಳಿದುಕೊಂಡು ಬರಲು ಕಳುಹಿಸಿದನು. ಅವರು ಸುಕೇಶಿನಿಯ ಮನೆಗೆ ಹೋದಾಗ, ಅವಳು ಮಾಯಾಜಾಲದಿಂದ ಅವರನ್ನು ಹಂದಿಗಳನ್ನಾಗಿ ಮಾಡಿದಳು. ಆದರೆ ಆಕೆಯ ಆಟ ರೂಪಧರನಮುಂದೆ ನಡೆಯುಲಿಲ್ಲ. ಆತನ ಆಪ್ತಳಾದಳು.]

ಆಕೆಯ ಸಲಹೆಯಂತೆ ರೂಪಧರನು ಸಮುದ್ರತೀರದಲ್ಲಿದ್ದ ತನ್ನ ಅನುಯಾಯಿಗಳನ್ನು ಸಮೀಪಿಸಿದನು. ಅವರೆಲ್ಲರೂ ನೌಕೆಯಬಳಿ ವ್ಯಾಕುಲ ಚಿತ್ತರಾಗಿ ಕುಳಿತಿದ್ದರು. ತಮ್ಮ ನಾಯಕನನ್ನು ಕಂಡಕೂಡಲೇ ಅವರಿಗೆ ಹೋದ ಪ್ರಾಣ ಬಂದಂತಾಯಿತು. ತಾಯಿಯನ್ನು ಕಂಡ ಎಳೆಗರುವಿನಂತೆ ಅವರು ಚಂಗನೆ ಹಾರಿ ತಮ್ಮ ನಾಯಕನ ಸುತ್ತಲೂ ನೆರೆದರು. ಇಥಾಕಾ ದೇಶವನ್ನು ಸೇರಿಕೊಂಡಿದ್ದರೆ ಅವರು ಅದಕ್ಕಿಂತಲೂ ಹೆಚ್ಚು ಹರ್ಷಿತರಾಗುತ್ತಿರಲಿಲ್ಲ. ಅವರ ಕಣ್ಣುಗಳಿಂದ ಆನಂದಾಶ್ರು ಧಾರಾಕಾರವಾಗಿ ಹರಿಯಿತು.

"ಎಲ್ಲಿ? ಉಳಿದ ಜೊತೆಗಾರರೆಲ್ಲಿ" ಎಂದು ಅವರು ಕುತೂಹಲದಿಂದ ರೂಪಧರನನ್ನು ಕೇಳಿದರು. ನಮ್ಮ ಸಂಗಡಿಗರೆಲ್ಲಾ ಸುಕೇಶಿನಿಯ ಸೌಧದಲ್ಲಿ ಸುರಕ್ಷಿತವಾಗಿದ್ದಾರೆ.

ಒಂದು ಗ್ರೀಕ್ ಪುರಾಣಕಥೆಯ ಆಧಾರದಿಂದ






ಗುಹೆಯನ್ನು ಪ್ರವೇಶಿಸಿದ ನಮ್ಮ ಸಂಗಡಿಗರಿ ಗಾದ ಗತಿ ಆಗಲೇ ಮರೆತು ಹೋದಿರಾ? ಆಗಲೂ ಈ ರೂಪಧರನೇ ಪುಣ್ಯ ಕಟ್ಟಿಕೊಂಡ. ಈತನ ದುಡುಕು ವರ್ತನೆ ಅವರ ಸಾವಿಗೆ ಕಾರಣವಾಯಿತು."

ಮಾಯಾವಿಯ ಆರೋಪವನ್ನು ಕೇಳಿ ರೂಪಧರನು ಕಿಡಿಕಿಡಿ ಯಾದನು. ಒರೆಯಿಂದ ಕತ್ತಿಯನ್ನು ತೆಗೆದು ಮಾಯಾವಿಯಮೇಲೆ ನುಗ್ಗಿದನು. ಇತರರು ಆತನನ್ನು ತಡೆದರು. "ಮಾಯಾವಿಗೆ ಬರಲಿಷ್ಟವಿಲ್ಲದಿದ್ದರೆ ನೌಕೆಯ ಬಳಿ ಬಿದ್ದಿರಲಿ. ನಾವೆಲ್ಲರೂ ನಿನ್ನೊಂದಿಗೆ ಸುಕೇಶಿನಿಯ ಸೌಧಕ್ಕೆ ಬರುತ್ತೇವೆ. ನಮ್ಮನ್ನು ಕರೆದುಕೊಂಡು ಹೋಗು" ಎಂದು ಇತರರು ಹೇಳಿದರು. ಎಲ್ಲರೂ ಹೊರಟಾಗ ಮಾಯಾವಿಯೂ ಅವರನ್ನು ಹಿಂಬಾಲಿಸಿದನು.

ಸುಕೇಶಿನಿ ರೂಪಧರನ ಸಂಗಡಿಗರೆಲ್ಲರಿಗೂ ಅಭ್ಯಂಜನಕ್ಕೆ ಏರ್ಪಾಟುಮಾಡಿ, ಹಾಕಿಕೊಳ್ಳಲು ಉತ್ತಮ ಪೋಷಾಕನ್ನು ಕೊಡಿಸಿದಳು. ಮಾಯಾವಿಯೊಂದಿಗೆ ಮೊದಲು ಬಂದಿದ್ದ ಗ್ರೀಕರು ಊಟಮಾಡುತ್ತಿದ್ದರು. ಎರಡು ಗುಂಪಿನವರು ಪರಸ್ಪರ ನೋಡಿಕೊಂಡು ಆನಂದಾತಿರೇಕದಿಂದ ಗಟ್ಟಿಯಾಗಿ ಕೂಗಾಡ ತೊಡಗಿದರು.

ಸುಕೇಶಿನಿ ರೂಪಧರನಬಳಿಗೆ ಬಂದು "ನಿಮ್ಮ ಸಂಗಡಿಗರು ಹಿಂದೆ ತಾವು ಅನುಭವಿಸಿದ ಕಷ್ಟಗಳನ್ನು ಮರೆತು ಬಿಡಲಿ. ನೀವು ಪಟ್ಟ ಕಷ್ಟಗಳನ್ನು ನಾನರಿತಿರುವೆನು. ಯಾವ

ಅವರೆಲ್ಲಾ ಉಂಡು, ಕುಡಿದು ಉಲ್ಲಾಸದಿಂದಿರುವರು. ಮೊದಲು ಈ ನೌಕೆಯನ್ನು ದಡಕ್ಕೆ ತಲುಪಿಸಿ, ಅದರಲ್ಲಿರುವ ಸಾಮಾನುಗಳನ್ನು ಒಂದು ಗುಹೆಯಲ್ಲಿ ಭದ್ರಪಡಿಸೋಣ. ನಂತರ ನಾನು ನಿಮ್ಮೆಲ್ಲರನ್ನೂ ಸುಕೇಶಿನಿಯ ಮನೆಗೆ ಕರೆದುಕೊಂಡು ಹೋಗುತ್ತೇನೆ" ಎಂದ ರೂಪಧರ. ಅವರೆಲ್ಲರೂ ಕೂಡಲೇ ಕೆಲಸ ಕಾರ್ಯಗಳಲ್ಲಿ ತೊಡಗಿದರು. ಆದರೆ ಮಾಯಾವಿ ಅವರನ್ನು ಕುರಿತು ಹೀಗೆಂದನು:

"ಮೂರ್ಖರೇ, ನೀವೆಲ್ಲಿಗೆ ಹೋಗಬಯಸುವಿರಿ? ಸುಕೇಶಿನಿಯ ಸೌಧಕ್ಕೋ? ಆಕೆ ನಿಮ್ಮನ್ನು ಸಿಂಹ, ತೋಳಗಳನ್ನಾಗಿ ಮಾಡಿ ತನ್ನ ಮನೆಯಮುಂದೆ ನಾಯಿಗಳಂತೆ ಕಟ್ಟಿ ಹಾಕುವಳು, ತಿಳಿಯಿತೇ? ಘಾಲಲೋಚನನ







ಸಂಕೋಚವೂ ಇಲ್ಲದೆ ಇಲ್ಲಿರುವಷ್ಟುಕಾಲ ಸುಖವಾಗಿ ಉಂಡು ಸಾರಾಯಿ ಕುಡಿಯಿರಿ. ನಿಮ್ಮ ಸ್ವದೇಶದಲ್ಲಿರುವಂತೆಯೇ ಭಾವಿಸಿ ಕಾಲಕಳೆಯಿರಿ " ಎಂದಳು.

ರೂಪಧರನು ಆಕೆಯ ಸಲಹೆಯಂತೆ ಒಂದು ವರ್ಷಕಾಲ ಆಕೆಯ ಅತಿಥಿಯಾಗಿದ್ದನು. ಒಂದು ವರ್ಷವಾದಮೇಲೆ ರೂಪಧರನ ಅನುಚರರು "ಇದೇನಿದು. ನಾವು ಮನೆಗೆ ಹಿಂತಿರುಗ ಬೇಡವೇ?" ಎಂದು ತಮ್ಮ ನಾಯಕನನ್ನು ಕೇಳಿದರು.

ರೂಪಧರನು ಸುಕೇಶಿನಿಯೊಂದಿಗೆ "ನಮ್ಮ ಸಂಗಡಿಗರು ಸ್ವದೇಶಕ್ಕೆ ಹಿಂತಿರುಗಲು ಅಪೇಕ್ಷಿಸುತ್ತಿದ್ದಾರೆ. ಇನ್ನು ನಾವು ಹೊರಡುವುದೇ ಉಚಿತ. ನಮ್ಮ ಪ್ರಯಾಣಕ್ಕೆ ನೀನು ಸಹಾಯ ಮಾಡಬೇಕು" ಎಂದ.

ನಿನ್ನನ್ನು ಬಲವಂತಪಡಿಸಿ ಉಳಿಸಿಕೊಳ್ಳಲು ನನಗಿಷ್ಟವಿಲ್ಲ. ಆದರೆ ನೀನು ಸ್ವದೇಶವನ್ನು ತಲುಪುವಮುನ್ನ ಮತ್ತೊಂದು ಪ್ರಯಾಣ ಮಾಡಬೇಕಾದೀತು. ಯಮಧರ್ಮನಿರುವ ನರಕದಲ್ಲಿ ಸಂಕೇತಿಕನೆಂಬ ದಿವ್ಯಜ್ಞಾನಿಯೊಬ್ಬನಿರುವನು. ಸತ್ತ ನಂತರವೂ ಆತನು ದಿವ್ಯಜ್ಞಾನವನ್ನು ಕಳೆದುಕೊಂಡಿಲ್ಲ. ನೀನು ಆತನನ್ನು ಭೇಟಿಮಾಡಿ ಆತನ ಸಲಹೆ ಪಡೆಯುವುದು ಒಳಿತು " ಎಂದಳು ಸುಕೇಶಿನಿ.

ರೂಪಧರನು ನಿರಾಶೆಗೊಂಡನು. ಸುಕೇಶಿನಿಯನ್ನು ಕುರಿತು "ಪ್ರಿಯ ಸುಕೇಶಿನಿ, ನರಕಕ್ಕೆ ಪ್ರಯಾಣ ಬೆಳೆಸುವುದು ನನ್ನಿಂದ



ಸಾಧ್ಯವೇ? ಯಾರಾದರು ನರಕಕ್ಕೆ ನೌಕೆಯಲ್ಲಿ ಪ್ರಯಾಣ ಮಾಡಿರುವುದುಂಟೇ?" ಎಂದು ಕೇಳಿದನು.

"ಧ್ವಜಸ್ತಂಭವನ್ನು ನಿಲ್ಲಿಸಿ, ತೆರೆಯ ಪಠವನ್ನು ಬಿಚ್ಚಿ ಸುಮ್ಮನೆ ಕುಳಿತಿರು. ಉತ್ತರ ದಿಕ್ಕಿಗೆ ಬೀಸುವವಾಯು ನಿನ್ನನೌಕೆಯನ್ನು ನೆಟ್ಟಗೆ ನರಕವನ್ನು ತಲುಪಿಸುತ್ತದೆ. ನಿನ್ನ ನೌಕೆ ಸಮುದ್ರವನ್ನು ದಾಟಿದನಂತರ ಒಂದು ತೀರ ಕಾಣಿಸುವುದು. ಅಲ್ಲಿ ಭಾರಿಭಾರಿ ವೃಕ್ಷಗಳಿರುತ್ತಿವೆ. ತೀರದಲ್ಲಿ ನಿನ್ನ ನೌಕೆಯನ್ನು ನಿಲ್ಲಿಸಿ, ಕಾಲುನಡಿಗೆಯಲ್ಲಿ ಯಮಲೋಕಕ್ಕೆ ಹೋಗು. ಕೊಂಚದೂರ ಹೋದನಂತರ ನಿನಗೊಂದು ಬಂಡೆ ಕಾಣಿಸುವುದು. ಅದರ ಸಮೀಪದಲ್ಲಿ ಅಗ್ನಿನದಿ, ಅಶ್ರುನದಿಗಳು ಸಂಗ



ಮಿಸಿ ವೈತರಣಿ ನದಿಯಾಗುವುದು. ಆ ಬಂಡೆಯ ಬಳಿ ಒಂದು ಮೊಳದುದ್ದ, ಒಂದು ಮೊಳದಗಲದ ಹಳ್ಳವನ್ನು ತೋಡು. ಆ ಹಳ್ಳದಲ್ಲಿ ಪಿತೃದೇವತೆಗಳಿಗೆ ತರ್ಪಣಬಿಟ್ಟು, ಪಿಂಡದಾನಮಾಡು. ಈ ರೀತಿ ಪಿತೃದೇವತೆಗಳನ್ನು ಪೂಜಿಸಿ, ನಿನ್ನನ್ನು ಸುರಕ್ಷಿತವಾಗಿ ಇಥಾಕಾ ಪಟಣಕ್ಕೆ ಸೇರಿಸುವಂತೆ ಪ್ರಾರ್ಥಿಸು. ಮನೆಯನ್ನು ಸೇರಿದಕೂಡಲೇ ಬಲಿ ಕೊಡುವುದಾಗಿ ಹರಕೆ ಮಾಡಿಕೊ. ತರುವಾಯ ಒಂದು ಕರಿಕುರಿಯನ್ನು, ಹೋತನನ್ನು ಬಲಿಕೊಟ್ಟು ಅಗ್ನಿಯಲ್ಲಿ ಹಾಕು. ಹೀಗೆ ಮಾಡಿ ಯಮಧರ್ಮರಾಜನಿಗೂ, ನರಕವಾಸಿಗಳಿಗೂ ಭಕ್ತಿಪೂರ್ವಕವಾಗಿ ಪ್ರಣಾಮಮಾಡು. ಆಗ ಪಿತೃದೇವತೆಗಳೆಲ್ಲಾ ಬಲಿಯನ್ನು ಸ್ವೀಕರಿಸಲು



ಬರುತ್ತವೆ. ಅವರೊಂದಿಗೆ ಸಂಕೇತಿಕನೂ ಬರುವನು. ಆತನು ನಿನಗೆ ಸ್ವಗೃಹವನ್ನು ಸೇರುವಮಾರ್ಗವನ್ನು ತಿಳಿಸುವತನಕ ಬೇರೆ ಪಿತೃದೇವತೆಗಳು ಬಲಿಯನ್ನು ಸ್ವೀಕರಿಸಲು ಬಿಡಬಾರದು." ಎಂದು ಸುಕೇಶಿನಿ ರೂಪಧರನಿಗೆ ವಿವರಿಸಿ ಹೇಳಿದಳು.

ಇಷ್ಟರಲ್ಲಿ ಬೆಳಗಾಯಿತು. ರೂಪಧರನು ತನ್ನ ಅನುಚರರನ್ನು ಎಬ್ಬಿಸಿ "ಏಳಿ, ಎದ್ದೇಳಿ. ನಾವಿಲ್ಲಿಂದ ಹೊರಡಬೇಕು. ಸುಕೇಶಿನಿ ಈಗ ನಮಗೆ ಮತ್ತೊಂದು ಪ್ರಯಾಣ ಗೊತ್ತು ಮಾಡಿರುವಳು" ಎಂದ.

ಪಾಪ, ರೂಪಧರನ ಸಂಗಡಿಗರು ಸ್ವದೇಶಕ್ಕೆ ಹೊರಡುತ್ತಿರುವೆವೆಂದು ಭಾವಿಸಿ ಹರ್ಷಚಿತ್ತರಾದರು. ಆದರೆ ತಾವು ಪ್ರಯಾಣ ಬೆಳೆಸುತ್ತಿರುವುದು ನರಕಕ್ಕೆಂದು ತಿಳಿದನಂತರ ಅವರು ಜೋಲುಮುಖ ಹಾಕಿದರು. ದುಃಖ ತಡೆಯಲಾರದೆ ಕೆಲವರು ತಮ್ಮ ತಲೆ ಕೆರೆದುಕೊಂಡು ಅಳ ಲಾರಂಭಿಸಿದರು. ಆದರೆ ಅವರು ಪ್ರಯಾಣ ನಿಲ್ಲಿಸುವಂತಿರಲಿಲ್ಲ.

ಅವರು ನೌಕೆಯ ಬಳಿಗೆ ಬರುವಷ್ಟರಲ್ಲಿ ಸುಕೇಶಿನಿ ಅಲ್ಲಿಗೆ ಬಂದು ಅವರಿಗಾಗಿ ಕಾದಿದ್ದಳು. ಆಕೆ ನೌಕೆಯಬಳಿ ಒಂದು ಕರಿಕುರಿ ಮತ್ತು ಹೋತನನ್ನು ತಂದಿತ್ತು ಯಾರೊಂದಿಗೂ ಮಾತನಾಡದೆ ಹಿಂತಿರುಗಿದಳು. ಗ್ರೀಕರು ತಮ್ಮ ನೌಕೆಯನ್ನು ನೀರಿಗೆಳೆದು, ಧ್ವಜಸ್ತಂಭ ನಿಲ್ಲಿಸಿ, ತೆರೆಚಾಪೆ ಬಿಚ್ಚಿದರು. ಕುರಿ ಮತ್ತು ಹೋತನನ್ನು



ಸಾಗಿಸಿಕೊಂಡು ಎಲ್ಲರೂ ನೌಕೆಯನ್ನೇರಿದರು. ಸುಕೇಶಿನಿಯ ಪ್ರಭಾವದಿಂದ ಉತ್ತರ ದಿಕ್ಕಿಗೆ ಗಾಳಿಬೀಸಿ ನೌಕೆ ಹೊರಟಿತು. ಸಾಯಂಕಾಲದವರೆವಿಗೂ ಯಾವತೊಂದರೆಯೂ ಇಲ್ಲದೆ ಹಡಗು ಸುರಕ್ಷಿತವಾಗಿ ಸುಗಮವಾಗಿ ಸಾಗಿತು.

ಸೂರ್ಯನು ಅಸ್ತಮಿಸಿದನು ; ನಾಲ್ಕು ಸುತ್ತಲೂ ಅಂಧಕಾರ ಆವರಿಸಿತು. ಆ ಕತ್ತಲಲ್ಲಿ ನೌಕೆ ತೀರವನ್ನು ಸೇರಿತು.

ರೂಪಧರನು ಸುಕೇಶಿನಿ ಹೇಳಿದಂತೆ ಅಗ್ನಿನದಿ, ಅಶ್ರುನದಿ ಕೂಡುವ ಸ್ಥಳದಲ್ಲಿ ಒಂದು ಹಳ್ಳ ತೋಡಿ ತರ್ಪಣಬಿಟ್ಟನು. ಪಿಂಡವನ್ನು ಅರ್ಪಿಸಿ, ಪಿತೃದೇವತೆಗಳಿಗೆ ಆಹ್ವಾನವಿತ್ತನು. ತರುವಾಯ ಕುರಿಗಳನ್ನು ಬಲಿಕೊಟ್ಟು ಅಗ್ನಿಯಲ್ಲಿ ಹೋಮಮಾಡಿದನು.

ಮರುಕ್ಷಣವೇ ಗುಂಪುಗುಂಪಾಗಿ ಪಿತೃದೇವತೆಗಳು ಕೋಲಾಹಲ ಮಾಡುತ್ತಾ ಬಲಿಯನ್ನು ಸ್ವೀಕರಿಸಲು ಮುಂದೆ ಬಂದುವು. ರೂಪಧರನು ಯಮಧರ್ಮರಾಜನಿಗೂ ಮತ್ತೆ ಪರರಿಗೂ ಕೈಮುಗಿದು ಇಂತೆಂದನು. "ನಾನು ಸಂಕೇತಿಕರನ್ನು ಕೆಲವು ಪ್ರಶ್ನೆಗಳನ್ನು ಕೇಳಬೇಕು. ಅದುವರೆವಿಗೆ ಬಲಿಯನ್ನು ಯಾರೂ ಸ್ವೀಕರಿಸಲು ಸಾಧ್ಯವಿಲ್ಲ" ಎಂದ.

ಉಳಿದವರನ್ನು ತಳ್ಳಿಕೊಂಡು ಹೆಂಗಸೊಬ್ಬಳು ಮುಂದೆ ಬಂದಳು. ಆಕೆ ರೂಪಧರನ ತಾಯಿ. ರೂಪಧರನು ಟ್ರಾಯ್ ನಗರದಮೇಲೆ ಯುದ್ಧಕ್ಕೆ ಹೊರಟಾಗ ಆಕೆ




ಜೀವಿಸಿದ್ದಳು. ಆಕೆಯ ಮರಣ ರೂಪಧರನಿಗೆ ತಿಳಿಯದು. ಆಕೆಯನ್ನು ಕಂಡು ರೂಪಧರನು ತುಂಬಾ ಶೋಕಿಸಿದನು. ಆದರೂ ಬಲಿಯನ್ನು ಮುಟ್ಟಲು ಮಾತ್ರ ಆಕೆಗೆ ಅವಕಾಶ ಕೊಡಲಿಲ್ಲ.

ಆಕೆಯಹಿಂದೆಯೇ ಸಂಕೇತಿಕನು ಕೈಯಲ್ಲಿ ಚಿನ್ನದಕೋಲನ್ನು ಹಿಡಿದುಕೊಂಡು ಬಂದನು. ಆತನು ರೂಪಧರನ ಗುರುತು ಹಿಡಿದು "ಮಗೂ, ಎಂದೂ ಸೂರ್ಯನ ಬೆಳಕನ್ನು ಕಾಣದ ಈ ಪಿತೃಲೋಕಕ್ಕೆ ನೀನೇಕೆ ಬಂದೆ? ಆತ್ತ ಸ್ವಲ್ಪಸರಿದರೆ ಬಲಿಯನ್ನು ಸ್ವೀಕರಿಸಿ ನಿನಗೆ ಬೇಕಾದ ಸಹಾಯ ಮಾಡುವೆನು" ಎಂದನು. ಕೂಡಲೇ ರೂಪಧರನು ಸ್ವಲ್ಪ ಪಕ್ಕಕ್ಕೆಸರಿದು ಆತನು ಬಲಿ




ಯನ್ನು ಸ್ವೀಕರಿಸಲು ಅವಕಾಶ ಮಾಡಿಕೊಟ್ಟನು. ತರವಾಯ ಆತನು ರೂಪಧರನನ್ನು ಉದ್ದೇಶಿಸಿ "ಮಗೂ, ನೀನು ಸ್ವದೇಶಕ್ಕೆ ಹೋಗಲು ತವಕದಿಂದಿರುವೆ. ಸ್ವದೇಶಕ್ಕಿಂತಲೂ ಸ್ವರ್ಗ ಬೇರೆಲ್ಲಿದೆ? ಆದರೆ ದೇವತೆಗಳು ನಿನ್ನಮೇಲೆ ಕೋಪಿಸಿಕೊಂಡಿರುವರು. ಅಂತಲೇ ನೀನು ನಾನಾ ಅವಸ್ಥೆಗಳನ್ನು ಪಡಬೇಕಾಗುತ್ತದೆ. ಪಾರಾಗುವಸೂಚನೆಯೇ ಇಲ್ಲ. ಆದರೂ ನೀನು ಮನೆಯನ್ನು ಸುರಕ್ಷಿತವಾಗಿ ಸೇರುವೆ. ನೀನು ಮನೆಗೆ ಹೋಗುವ ದಾರಿಯಲ್ಲಿ ತ್ರಿನಾಪಿಯಾ ಎಂಬ ದ್ವೀಪ ಸಿಗುತ್ತದೆ. ಅಲ್ಲಿ ಸೂರ್ಯಭಗವಾನನಿಗೆ ಸೇರಿದ ಪಶುಗಣಗಳಿರುವುವು. ನೀನಾಗಲೀ, ನಿನ್ನ ಸಂಗಡಿಗರಾಗಲೀ ಅವುಗಳ ಗೋಜಿಗೆ ಹೋಗಬಾರದು. ಒಂದುವೇಳೆ ಆ ಪಶುಗಳಿಗೆ ಅಪಚಾರವಾದರೆ ನಿನ್ನ ಅನುಚರರಾಗಲೀ, ನಿಮ್ಮ ನೌಕೆಯಾಗಲೀ ಇಥಕಾಪಟ್ಟಣವನ್ನು ಸೇರುವುದು ಅಸಂಭವ. ನೀನು ಮಾತ್ರ ಸಾವನ್ನು ತಪ್ಪಿಸಿಕೊಂಡು ಒಬ್ಬೊಂಟಿಗನಾಗಿ ಮನೆಸೇರುವೆ. ಆಗಲೂ ನಿನ್ನ ಕಷ್ಟಗಳು ಮುಗಿಯುವುದಿಲ್ಲ. ನಿನ್ನ ಮನೆಯಲ್ಲಿ ಶತ್ರುಗಳು ಸೇರಿಕೊಂಡು, ತಮ್ಮನ್ನು ಮದುವೆಯಾಗುವಂತೆ ನಿನ್ನ ಹೆಂಡತಿಯನ್ನು ಪೀಡಿಸುತ್ತಿರುತ್ತಾರೆ. ಆದರೆ ನೀನು ಅವರನ್ನೆಲ್ಲಾ ಸಂಹಾರಮಾಡಬಲ್ಲೆ. ಶತ್ರುನಾಶ ಮಾಡಿದ ನಂತರ ನೀನು ದೇವತೆಗಳಿಗೆ ಹರಕೆ ಸಲ್ಲಿಸಬೇಕು. ಅದನ್ನು ಮಾಡುವರೀತಿಯನ್ನು ತಿಳಿಸುವೆನು ಕೇಳು. ನೌಕೆ ನಡೆಸುವ ಹುಟ್ಟನ್ನು ತೆಗೆದುಕೊಂಡು ಅನ್ನಕ್ಕೆ ಉಪ್ಪು ಬೆರಸದ ಮತ್ತು ಸಮುದ್ರವೆಂದರೇನೋ ತಿಳಿಯದವ್ಯಕ್ತಿ ಕಾಣಿಸುವವರೆವಿಗೂ ಪ್ರಯಾಣಮಾಡಬೇಕು. ಅಂತಹ ಮನುಷ್ಯರನ್ನು ಗುರುತಿಸುವ ಬಗೆಯನ್ನೂ ತಿಳಿಸುವೆನು. ಅವರು ನಿನ್ನ ಭುಜದಮೇಲಿರುವ ಹುಟ್ಟನ್ನು ತಿಳಿದುಕೊಳ್ಳಲಾರದೆ ಅದು ವ್ಯವಸಾಯದ ಸಾಧನವೇ ಎಂದು ನಿನ್ನನ್ನು ಕೇಳುವರು. ಅಂತಹ ಮನುಷ್ಯರು ಕಾಣಿಸಿದ ಕಡೆ ಆ ಹುಟ್ಟನ್ನು ನೆಲದಲ್ಲಿ ನೆಟ್ಟು, ವರುಣದೇವನಿಗೆ ಬಲಿಕೊಡಬೇಕು. ಒಂದು ಕುರಿ, ಒಂದು ಎತ್ತು, ಒಂದು ಹಂದಿಯನ್ನು ಬಲಿಕೊಟ್ಟು ಮನೆಗೆಹೋಗು. ನೀನು ದೀರ್ಘಕಾಲ



ಜೀವಿಸಿ, ಕೊನೆಗೆ ಸಮುದ್ರ ಪ್ರಯಾಣ ದಿಂದಲೇ ನಿಶ್ಚಿಂತೆಯಿಂದ ಸುಖವಾದ ಸಾವನ್ನು ಪಡೆಯುವೆ. ಆ ಸಮಯದಲ್ಲಿ ನಿನ್ನ ಆಪ್ತೇಷ್ಟರು ನಿನ್ನಬಳಿಯಿರುತ್ತಾರೆ" ಎಂದು ಭವಿಷ್ಯನುಡಿದನು.

"ವಿಧಿಯನ್ನು ತಪ್ಪಿಸಲು ಯಾರಿಂದ ಸಾಧ್ಯ? ಆದರೊಂದು ವಿಷಯ ತಿಳಿಯಲು ಕುತೂಹಲನಾಗಿದ್ದೇನೆ. ಅಲ್ಲಿ ನನ್ನ ತಾಯಿಯ ಪ್ರೇತಾತ್ಮ ನಿಂತಿದೆ. ಆಕೆ ನನ್ನ ಕಡೆ ನೋಡುವು ದಿಲ್ಲ. ನನ್ನೊಂದಿಗೆ ಮಾತನಾಡುತ್ತಿಲ್ಲ. ಬಲಿಯ ಕಡೆ ದುರಗುಟ್ಟಿಕೊಂಡು ನೋಡುತ್ತಿದ್ದಾಳೆ. ಆಕೆ ನನ್ನನ್ನು ಗುರ್ತಿಸುವ ಬಗೆಯನ್ನು ತಿಳಿಸಿ ಕೊಡುವಿರಾ?" ಎಂದ ರೂಪಧರ.

"ಮಗೂ, ಬಲಿ ಸ್ವೀಕರಿಸುವತನಕ ಪಿತೃ ದೇವತೆಗಳು ನಿಜವರಿಯಲಾರರು, ಹೇಳ ಲಾರರು, ಈ ವಿಷಯ ಜ್ಞಾಪಕದಲ್ಲಿರಲಿ," ಎಂದು ಹೇಳಿ ಸಂಕೇತಿಕನು ಯಮಲೋಕಕ್ಕೆ ಹೊರಟಹೋದನು.

ರೂಪಧರನು ಒಂದು ಪಕ್ಕಕ್ಕೆ ನಿಂತು ತನ್ನ ತಾಯಿ ಬಲಿ ಸ್ವೀಕರಿಸುವವರೆವಿಗೂ ಕಾದಿದ್ದನು. ಆಕೆ ಬಲಿಯನ್ನು ಸ್ವೀಕರಿಸಿದ ನಂತರ ತಲೆಯೆತ್ತಿ ಮಗನನ್ನು ಗುರ್ತಿಸಿ "ಅಪ್ಪಾ, ಮಗೂ, ಜೀವಿಸಿದ್ದೂ ಈ ಲೋಕಕ್ಕೆ ಹೇಗೆ ಬಂದೆಯಪ್ಪಾ. ಅದು ಸಾಧ್ಯವಿಲ್ಲವಲ್ಲಾ! ಟ್ರಾಯ್ ನಗರದಿಂದ ನೆಟ್ಟಗೆ ಇಲ್ಲಿಗೆ ಬಂದೆಯಾ? ಇನ್ನೂ ಇಥಾಕಕ್ಕೆ ಹೋಗ ಲಿಲ್ಲವೇ? ಕಂದಾ, ನಿನ್ನ ಹೆಂಡತಿಯನ್ನು




ಇನ್ನೂ ನೀನು ಕಂಡಿಲ್ಲವೆ?" ಎಂದು ಕೇಳಿ ದಳು. "ಇಲ್ಲಾಮ್ಮಾ, ಮನೆ ಸೇರಲಾರದೆ ನಾನಾ ಕಷ್ಟಗಳನ್ನು ಅನುಭವಿಸುತ್ತಿದ್ದೇನೆ. ಇಲ್ಲಿರುವ ಸಂಕೇತಿಕನ ಸಲಹೆ ಪಡೆಯಲು ನಾವಿಲ್ಲಿಗೆ ಬರಬೇಕಾಯಿತು. ಅಮ್ಮಾ, ನೀನು ಸತ್ತ ಬಗೆಹೇಗೆ? ಕಾಯಿಲೆಯಿಂದ ಮರಣ ಸಂಭವಿಸಿತೇ? ಇಲ್ಲ ಆಕಸ್ಮಿಕ ಮರಣವೋ? ತಂದೆಯವರು ಹೇಗಿರುವರು? ನನ್ನ ಮಗ ನೇನುಮಾಡತ್ತಿದ್ದಾನೆ. ಅವರು ನನ್ನ ಬರುವಿಕೆ ಯನ್ನು ಎದುರು ನೋಡುತ್ತಿರುವರೇ? ನಾನಿನ್ನು ಬರಲಾರೆನೆಂದು ಭಾವಿಸಿ ಮತ್ತೆ ಯಾರವಶವಾದರೂ ಆದರೇ? ನನ್ನ ಪತ್ನಿ ಏನು ಹೇಳುವಳು? ಏನು ಮಾಡಲು ನಿರ್ಧರಿ ಸಿದ್ದಾಳೆ. ಮಗನೊಂದಿಗೆ ಆಸ್ತಿಯನ್ನು



ಕಾಪಾಡಿಕೊಂಡಿದ್ದಾಳೆಯೇ? ಇಲ್ಲ ಮತ್ತೆ ಯಾರನ್ನಾದರೂ ವಿವಾಹವಾಗಿರುವಳೇ?" ಎಂದು ಅನೇಕ ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸಿದ ರೂಪಧರ.

"ಅವಳು ನಿನ್ನ ಮನೆಯಲ್ಲೇ ಉಳಿದಿರುವಳು. ಅವಳ ಸಹನೆಯೆಷ್ಟು, ತಾಳ್ಮೆಯೆಷ್ಟು, ಅವಳ ಹೃದಯ ನಿನಗಾಗಿ ಪರಿತಪಿಸುತ್ತಿದೆ. ನಿನ್ನ ಆಸ್ತಿಪಾಸ್ತಿಗಳು ನಿನ್ನಹೆಸರಿನಲ್ಲೇ ಇವೆ. ನಿನ್ನ ಪುತ್ರ ವಿಜಯಧ್ವಜ ನಿನ್ನ ಆಸ್ತಿಯ ಹಕ್ಕುದಾರನಾಗಿ, ರಾಜನು ಮಾಡಬೇಕಾದ ಕರ್ತವ್ಯಗಳನ್ನು ನಿರ್ವಂಚನೆಯಿಂದ ನಿರ್ವಹಿಸುತ್ತಿರುವನು. ನಿಮ್ಮ ತಂದೆ ಹಳ್ಳಿಯಲ್ಲೇ ಇರುತ್ತಾರೆ. ಪಟ್ಟಣದಕಡೆ ಮುಖ ಹಾಕುವುದಿಲ್ಲ. ಅವರಿಗೆ ಚಳಿಗಾಲದಲ್ಲಿ ಒಂದು ಮೆತ್ತೆಯಾಗಲೀ, ಕಂಬಳಿಯಾಗಲೀ ಇರುವುದಿಲ್ಲ. ಪಶುಗಳ ನಡುವೆ ಮರಳಿನಮೇಲೆ, ಬೆಂಕಿ ಮಾಡಿಕೊಂಡು ಮಲಗಿಕೊಳ್ಳುತ್ತಾರೆ. ಇತರ ಕಾಲಗಳಲ್ಲಿ ದ್ರಾಕ್ಷೆತೋಟದಲ್ಲಿ ಮಲಗುವರು. ವೃದ್ಧಾಪ್ಯದೊಂದಿಗೆ ನೀನು ಹಿಂತಿರುಗಲಿಲ್ಲವೆಂಬ ಚಿಂತೆ ಅವರನ್ನು ಕಾಡುತ್ತಿದೆ. ಕೊರಗಿ ಸೊರಗಿ ಹೋಗಿದ್ದಾರೆ. ಇನ್ನು ನನ್ನ ವಿಷಯ. ನಾನು ಯಾವ ಕಾಯಿಲೆಯಿಂದಲೂ ಸಾಯಲಿಲ್ಲ, ಹಠಾತ್ತನೆ ಮರಣ ಸಂಭವಿಸಿತು. ನಿನ್ನನ್ನು ಕಾಣದೆ ನಿನಗಾಗಿ ಪರಿತಪಿಸುತ್ತ ಸತ್ತೆನು" ಎಂದಳು.

ರೂಪಧರನು ತಾಯಿಯನ್ನು ಅಪ್ಪಿಕೊಳ್ಳಲು ಯತ್ನಿಸಿದನು. ಆದರೆ ಸಾಧ್ಯವಾಗಲಿಲ್ಲ. ಮೂರುಬಾರಿ ಪ್ರಯತ್ನಿಸಿದರೂ ವಿಫಲವಾಯಿತು. ಆತನು ದೈನ್ಯತೆಯಿಂದ "ನಾನೊಂದುಸಾರಿ ನಿನ್ನನ್ನು ಅಪ್ಪಿಕೊಳ್ಳಲು ಅವಕಾಶಕೊಡಲಾರೆಯಾಮ್ಮಾ? ನನ್ನಿಂದೇಕೆ ದೂರವಾಗುವೆ?" ಎಂದು ಹಲುಬಿದನು.

"ಜೀವದಿಂದಿರುವವರು ಮರಣಗೊಂಡವರನ್ನು ಅಪ್ಪಿಕೊಳ್ಳುವುದಾದರು ಹೇಗೆ. ನೀನು ಅಪ್ಪಿಕೊಳ್ಳ ಬೇಕಾದ ಶರೀರ ಆಗಲೇ ಬೂದಿಯಾಗಿಹೋಗಿದೆ. ಈ ಅಂಧಕಾರ ಮಯ ಲೋಕದಿಂದ ಆದಷ್ಟು ಬೇಗ ಹೊರಟುಬಿಡು. ಇಲ್ಲಿ ಕಂಡ ವಿಷಯಗಳನ್ನು, ನಿನ್ನ ಹೆಂಡತಿಗೆ ಹೇಳು" ಎಂದಳು ರೂಪಧರನ ತಾಯಿ.

[ಇನ್ನೂ ಇದೆ]






## 3

[ ಮೊರಾಕೋ ದೇಶದಿಂದ ಚೀನಾದೇಶಕ್ಕೆ ಬಂದ ಮಾಂತ್ರಿಕನು ಅಲ್ಲಾದೀನನ ತಾಯಿಗೆ ತಾನು ಅಲ್ಲಾದೀನನ ಕಕ್ಕನೆಂದು ಆಕೆಯನ್ನು ನಂಬಿಸಿ ಅಲ್ಲಾದೀನನನ್ನು ಗಣ್ಯ ವರ್ತಕನನ್ನಾಗಿ ಮಾಡುವುದಾಗಿ ಹೇಳಿ, ನಗರಕ್ಕೆ ಸ್ವಲ್ಪದೂರದಲ್ಲಿ ಭೂಗರ್ಭದಲ್ಲಿದ್ದ ಗುಹೆಗೆ ಕಳುಹಿಸಿದನು. ಅಲ್ಲಾದೀನನು ಗುಹೆಯಿಂದ ತಂದ ದೀಪವನ್ನು ತನಗೆ ಕೊಡದಿರಲು ಮಾಂತ್ರಿಕನು ರೊಚ್ಚಿಗೆದ್ದು ಅವನನ್ನು ಗುಹೆಯಲ್ಲಿ ಭೂಸ್ಥಾಪನೆ ಮಾಡಿದನು. ]

ಆ ಮಾಂತ್ರಿಕನಿಗೆ ಅನೇಕ ಬಗೆಯ ಮಂತ್ರ ತಂತ್ರಗಳು ತಿಳಿದಿದ್ದುವು. ಅವನು ಬಾಲಕನಿರುವಾಗಲೇ ಅನೇಕ ಉಚ್ಚಾಟನೆಗಳನ್ನೂ, ಪ್ರಯೋಗಗಳನ್ನೂ, ಉಪಾಸನೆಗಳನ್ನೂ ಪ್ರಾರಂಭಿಸಿ ತನ್ನ ನಲವತ್ತನೇ ವಯಸ್ಸಿನಲ್ಲಿ ಸಾಟಿಯಿಲ್ಲದ ಶಕ್ತಿಗಳನ್ನು ಸಂಪಾದಿಸಿದನು. ಆ ಶಕ್ತಿಗಳಜೊತೆಗೆ ಅವನಿಗೆ ರಹಸ್ಯಜ್ಞಾನವೂ ಲಭಿಸಿತ್ತು. ಅದರಿಂದ ರಹಸ್ಯವಾಗಿದ್ದ ಒಂದು ವಿಚಿತ್ರ ವಿಷಯವನ್ನು ತಿಳಿದುಕೊಂಡನು. ಸಾವಿರಾರು ಮೈಲಿ ದೂರದಲ್ಲಿದ್ದ ಚೀನಾ ದೇಶದಲ್ಲೊಂದು ನಗರವಿದೆ. ಆ ನಗರದ ಸಮೀಪದಲ್ಲಿ ಭೂಗರ್ಭದಲ್ಲಿ ಪ್ರಪಂಚದಲ್ಲೇ ಎಲ್ಲೂ ಇಲ್ಲದಂತಹ ಭಾರಿಪ್ರಮಾಣದ ನಿಧಿಯಿದೆ. ಆ ನಿಧಿಯೊಂದಿಗೆ ಒಂದು ಅದ್ಭುತ ದೀಪವೂ ಇದೆ. ಆ ದೀಪವನ್ನು ಪಡೆದವನು ನಿಧಿಯನ್ನೂ ಸಾಧಿಸಬಹುದು. ಆದರೆ ಅಲ್ಲಾದೀನ್ ಎಂಬ ಬಾಲಕನಿಗೆ ಮಾತ್ರ ಆ ದೀಪವನ್ನು ಹೊರಗೆ ತರುವ ಶಕ್ತಿಯಿದೆ.

ಮಾಂತ್ರಿಕನು ಮೊರಾಕೋ ದೇಶದಲ್ಲಿದ್ದುಕೊಂಡೇ ಈ ವಿಷಯಗಳನ್ನೆಲ್ಲಾ ಸಂಗ್ರಹಿ

ಎಸ್. ಪ್ರತಿಭಾಕುಮಾರಿ

ಸಿದ್ದನು. ಅವನು ಕೂಡಲೇಹೊರಟು ಬಹಳ ಪ್ರಯಾಸಪಟ್ಟು ಚೀನಾದೇಶಕ್ಕೆ ಬಂದ. ಹುಡುಕಿದಾಗ ಅಲ್ಲಾದೀನ್ ಸಿಕ್ಕಿದನು. ಅದು ವರೆವಿಗೆ ಅವನು ಎಣಿಸಿದ್ದಂತೆ ಎಲ್ಲಾ ಸುಗುಮ ವಾಗಿ ಸಾಗಿತು. ಆದರೆ ಕೊನೆಗಳಿಗೆಯಲ್ಲಿ ಅಲ್ಲಾದೀನ್ ಮಾಂತ್ರಿಕನಿಗೆ ದೀಪ ಕೊಡಲು ನಿರಾಕರಿಸಿದನು. ಮಾಂತ್ರಿಕನಿಗೆ ಕೋಪ ಮಿತಿಮೀರಿತು. ಅವನು ಅಲ್ಲಾದೀನ್‌ನನ್ನು ಗುಹೆಯಲ್ಲಿ ಬಂಧಿಸಿ, ಬಂದ ದಾರಿಗೆ ಸುಂಕ ವಿಲ್ಲವೆಂದು ನಿರಾಶೆಯಿಂದ ಮೊರಾಕೋ ದೇಶಕ್ಕೆ ಹಿಂತಿರುಗಿ ಹೋದನು.

ತನ್ನ ನೆತ್ತಿಯಮೇಲೆ ಕಾಣಿಸುತ್ತಿದ್ದ ಬಿಲ ಮುಚ್ಚಿಕೊಳ್ಳಲು ಅಲ್ಲಾದೀನ್ ಕಂಗಾಲಾಗಿ ಕೂಗಿಕೊಳ್ಳಲು ಆರಂಭಿಸಿದನು. ಆದರೆ ಅವನ ಮೊರೆಯುನ್ನು ಆಲಿಸುವವರು ಯಾರೂ ಇರ ಲಿಲ್ಲ. ತನ್ನನ್ನು ಈಗ ಅಸಹಾಯಕ ಸ್ಥಿತಿಯಲ್ಲಿ ಬಿಟ್ಟವ್ಯಕ್ತಿ ವಾಸ್ತವವಾಗಿ ಚಿಕ್ಕಪ್ಪನಲ್ಲವೆಂದೂ, ತಾನು ಮೋಸಹೋದೆನೆಂದೂ ಅಲ್ಲಾದೀನ್ ಗ್ರಹಿಸಿದನು. ಈ ಗುಹೆಯಲ್ಲಿ ತನಗೆ ಸಾವು ಖಂಡಿತವೆಂದು ನಿಶ್ಚಯಿಸಿಕೊಂಡು, ಮೆಟ್ಟಲಿ ಳಿದು ತೋಟವನ್ನು ಪ್ರವೇಶಿಸಲು ಪ್ರಯತ್ನಿ ಸಿದನು. ಆದರೆ ತೋಟಕ್ಕೆ ಹೋಗುವ ದ್ವಾರ ಮುಚ್ಚಿತ್ತು. ತೀರಾ ಹತಾಶನಾಗಿ ಮೆಟ್ಟಲ ಮೇಲೆ ನಿಟ್ಟುಸಿರು ಬಿಡುತ್ತಾ ಕುಳಿತು ಕೊಂಡನು.

ಅಲ್ಲಾದೀನ್ ಮೂರು ದಿನ ಅಲ್ಲೇ ಇದ್ದನು. ಅವನಿಗೆ ಆ ಮೂರು ದಿನ ತಿಂಡಿತೀರ್ಥಗಳಿರ ಲಿಲ್ಲ. ಒಂದುಸಾರಿ ಅಳುವನು. ಮತ್ತೊಮ್ಮೆ



ಅಲ್ಲಾನನ್ನು ಪ್ರಾರ್ಥಿಸುವನು. ತನಗೆ ಸಾವು ಖಂಡಿತವೆಂದು ಭಾವಿಸಿ ನಿರಾಶೆಯಿಂದ ಕೈಕೈ ಹಿಸುಕಿಕೊಳ್ಳುತ್ತಿರಲು ಅಕಸ್ಮಾತ್ ಅವನು ಬೆರಳಿನಲ್ಲಿದ್ದ ಉಂಗುರವನ್ನು ಉಜ್ಜಿದನು. ಆ ಉಂಗುರವನ್ನು ಅಲ್ಲಾದೀನನಿಗೆ ಮಾಂತ್ರಿಕನು ಕೊಟ್ಟಿದ್ದನಷ್ಟೆ?

ಹಾಗೆ ಉಜ್ಜಿದಕೂಡಲೇ ಕಪ್ಪುಬಣ್ಣದ ಉದ್ದನೆಯ ಭೂತವೊಂದು ಕಾಣಿಸಿಕೊಂಡು "ಪ್ರಭೂ, ಏನಪ್ಪಣೆ" ಎಂದು ಕೇಳಿತು.

ಅಲ್ಲಾದೀನನ ಹೃದಯ ಝಲ್ಲೆಂದಿತು. ಆದರೆ ಮಾಂತ್ರಿಕನ ಪ್ರಭಾವವನ್ನು ಕಣ್ಣಾರೆ ಕಂಡಿದ್ದನಾದುದರಿಂದ ಧೈರ್ಯದಿಂದ "ನೀನು ಯಾರು?" ಎಂದು ಕೇಳಿದನು. "ನಾನು ನಿಮ್ಮ ಬೆರಳಿನ ಉಂಗುರವನ್ನು ಆಶ್ರಯಿಸಿರುವ ಭೂತ. ಈ ಉಂಗುರ ಯಾರಬಳಿಯಿದ್ದರೆ ಅವರ ದಾಸನಾಗಿ, ಅವರು ಹೇಳಿದ ಕೆಲಸ ಮಾಡುವೆನು" ಎಂದಿತು ಭೂತ.

'ಹಾಗಾದರೆ ನನ್ನನ್ನು ಇಲ್ಲಿಂದ ಹೊರಗೆ ಕರೆದುಕೊಂಡುಹೋಗು' ಎಂದ ಅಲ್ಲಾದೀನ್.

ಮರುಕ್ಷಣವೇ ಭೂಮಿ ಪಳಾರನೆ ಬಿರುಕು ಬಿಟ್ಟುಕೊಂಡಿತು. ಅಲ್ಲಾದೀನ್ ಭೂಮಿಯ ಮೇಲಿದ್ದನು. ಮೂರು ದಿನ ಕತ್ತಲೆಯಲ್ಲಿದ್ದ ಕಾರಣ ಅವನಿಂದ ಸೂರ್ಯನ ಕಾಂತಿಯನ್ನು ಒಡನೆ ನೋಡಲಾಗಲಿಲ್ಲ. ನಿಧಾನವಾಗಿ ಕಣ್ಣು ತೆರೆದು ನೋಡಿ ತಾನು ಭೂಮಿಯಮೇಲಿರು ವುದನ್ನು ಖಚಿತಪಡಿಸಿಕೊಂಡನು. ಗುಹೆಯ ಗುರುತಾಗಲೀ, ಕಲ್ಲುಬಂಡೆಯಾಗಲೀ ಕಾಣಿಸ ಲಿಲ್ಲ. ಮಾಂತ್ರಿಕನು ಪುರುಳೆಗಳಿಂದ ಬೆಂಕಿ








ಮಾಡಿದ ಸ್ಥಳದಲ್ಲಿ ಬೂದಿಮಾತ್ರವಿತ್ತು. ದೂರದಲ್ಲಿ ತೋಟವೂ, ಅದರಾಚೆ ನಗರವೂ ಕಾಣಿಸಿತು. ಅಲ್ಲಾದೀನ ಭಾರಿ ನಿಟ್ಟುಸಿರೊಂದನ್ನು ಬಿಟ್ಟು, ಅಲ್ಲಾನಿಗೆ ವಂದನೆಗಳನ್ನು ಅರ್ಪಿಸಿ, ಮನೆಯ ಹಾದಿ ಹಿಡಿದನು.

ಮೂರು ದಿನ ಉಪವಾಸದಿಂದಿದ್ದರೂ ಅಷ್ಟುದೂರ ಹೇಗೆ ನಡೆದನೋ ಅವನಿಗೇ ತಿಳಿಯದು. ಮನೆಯಲ್ಲಿ ಕಾಲಿಟ್ಟಕೂಡಲೇ ತಾಯಿಯಮುಂದೆ ಮೂರ್ಛಿತನಾಗಿ ಬಿದ್ದನು.

ಅವನ ತಾಯಿ ಅವನನ್ನು ನೆನೆನೆನೆದು ಅಳುತ್ತಾ ಕುಳಿತಿದ್ದಳು. ಮೂರ್ಛಿತನಾದ ಮಗನ ಮುಖದಮೇಲೆ ನೀರೆರೆಚಿದಳು. ಸ್ವಲ್ಪ ಸಮಯದ ನಂತರ ಅಲ್ಲಾದೀನನಿಗೆ ಪ್ರಜ್ಞೆ ಬಂತು. ತಿನ್ನಲು ತಿಂಡಿ ತಂದುಕೊಟ್ಟಳು ತಾಯಿ. ಅಲ್ಲಾದೀನನಿಗೆ ತಿಂಡಿ ತಿಂದನಂತರ ತುಸ ಶಕ್ತಿ ಬಂದಂತಾಯಿತು. "ಅಮ್ಮಾ, ಚಿಕ್ಕಪ್ಪನೆಂದು ಹೇಳಿಕೊಂಡು ಬಂದಾತ ಒಬ್ಬ ಮಾಂತ್ರಿಕ. ಚಿಕ್ಕಪ್ಪನಲ್ಲ. ಬಹಳ ನೀಚ, ಕಠಿನಾತ್ಮ. ನನ್ನನ್ನು ಕೊಲ್ಲಲು ಪ್ರಯತ್ನಿಸಿದನು. ಅಮ್ಮಾ, ಅವನೇನು ಮಾಡಿದ ಗೊತ್ತೇ?" ಎಂದು ಅಲ್ಲಾದೀನ್ ನಡೆದ ವಿಷಯವನ್ನೆಲ್ಲಾ ತಾಯಿಗೆ ಅರುಹಿದನು.

ಆಕೆ ಕಣ್ಣರಳಿಸಿ "ಅಯ್ಯೊ, ಹಾಗೆಯೇ! ಅವನು ಕಳ್ಳನೆಂದು ನಾನು ಆಗಲೇ ಭಾವಿಸಿದ್ದೆ, ಮಗು, ಸಧ್ಯ ನೀನು ಜೀವದಿಂದ ಹಿಂತಿರುಗಿದೆಯಲ್ಲಾ ಅಷ್ಟೇ ಸಾಕು" ಎಂದಳು.

ಮೂರು ದಿನ ನಿದ್ರಾಹಾರಗಳಿಲ್ಲದ ಪ್ರಯುಕ್ತ ಅಲ್ಲಾದೀನನಿಗೆ ಜೊಂಪುಹತ್ತಿತು. ಹಾಸಿಗೆಯಮೇಲೆ ಮಲಗಿ ಮಾರನೇಯ ದಿನ ಮಧ್ಯಾಹ್ನದ ತನಕ ನಿದ್ದೆಮಾಡಿದನು. ಅವನು ನಿದ್ರೆಯಿಂದ ಎಚ್ಚೆತ್ತಕೂಡಲೇ "ಅಮ್ಮಾ, ಹಸಿವಾಗುತ್ತಿದೆ. ಅನ್ನಹಾಕು" ಎಂದ.

"ಅಯ್ಯೋ ಮಗನೇ, ಮನೆಯಲ್ಲಿ ತಿನ್ನಲು ಏನೂ ಇಲ್ಲವಲ್ಲಾ. ಅಷ್ಟೋ ಇಷ್ಟೋ ಇದ್ದ ತಿಂಡಿಯನ್ನು ನಿನಗೆ ಆಗಲೇ ಕೊಟ್ಟೆ. ಸ್ವಲ್ಪ ತಡಿ. ನಾನು ನೂತಿರುವ ನೂಲು ಮಾರಿ ಏನನ್ನಾದರೂ ತರುವೆನು" ಎಂದಳು.

"ನೂಲು ಮಾರಿದರೆ ಏನು ಸಿಗುತ್ತದೆಯೇ. ನಾನು ತಂದ ದೀಪವನ್ನು ತೆಗೆದುಕೊಂಡು ಬಾ. ಅದನ್ನು ಮಾರಿ ಹಣ ತರುತ್ತೇನೆ" ಎಂದ ಅಲ್ಲಾದೀನ್.







ಅವನ ತಾಯಿ ದೀಪವನ್ನು ತಂದು "ಇದು ತುಂಬಾ ಕೊಳೆಯಾಗಿದೆ ಮಗು. ಲಕಲಕಿಸುವಂತೆ ತೊಳೆದು ಶುಭ್ರಪಡಿಸಿದರೆ ಒಂದಿಷ್ಟು ಹೆಚ್ಚು ಹಣ ಬರಬಹುದು" ಎಂದಳು ಆಕೆ.

ಆಕೆ ಸ್ವಲ್ಪ ಮಣ್ಣನ್ನು ತೋಯಿಸಿ, ದೀಪವನ್ನು ತಿಕ್ಕಲಾರಂಭಿಸಿದಳು. ಆಕೆ ಒಂದೆರಡು ಬಾರಿ ದೀಪವನ್ನು ಉಜ್ಜಿದಕೂಡಲೇ ಆಕೆಯು ಎದುರಿನಲ್ಲಿ ತಾಳೆ ಮರದಷ್ಟು ಎತ್ತರದ ಭೂತವೊಂದು ಬಂದು ನಿಂತು "ಏನಪ್ಪಣೆ ಯಜಮಾನಿ! ನಾನೂ ಇನ್ನೂ ಇತರ ಭೂತಗಳೂ ಈ ದೀಪಯಾರೊಂದಿಗಿದ್ದರೆ ಅವರ ಸೇವೆ ಸಲ್ಲಿಸುವೆವು." ಎಂದಿತು.

ಆ ಭೂತವನ್ನು ಕಂಡಕೂಡಲೇ ಅಲ್ಲಾದೀನನ ತಾಯಿ ಭಯಕಂಪಿತಳಾದಳು. ಮರುಗಳಿಗೆ ಆಕೆ ಮೂರ್ಛೆಹೋದಳು.

ಮನೆಯಲ್ಲಿದ್ದ ಅಲ್ಲಾದೀನನಿಗೆ ಭೂತದ ಮಾತುಗಳು ಕೇಳಿಸಿದುವು. ಉಂಗುರದ ಭೂತದೊಂದಿಗೆ ಅವನು ಹಿಂದೊಂದು ಬಾರಿ ಮಾತನಾಡಿದ್ದ. ಅಂತಲೇ ಅವನು ತಾಯಿಯಿದ್ದ ಸ್ಥಳಕ್ಕೆ ಬಂದು ತಟಕ್ಕನೆ ಆ ದೀಪವನ್ನು ತೆಗೆದುಕೊಂಡನು. "ಏಯ್, ನನಗೆ ಹಸಿವಾಗಿದೆ. ತಿಂಡಿತಂದುಕೊಡು" ಎಂದು ಆಜ್ಞಾಪಿಸಿದನು. ಭೂತ ಕ್ಷಣಮಾತ್ರದಲ್ಲಿ ಒಂದು ಬೆಳ್ಳಿಯ ಹರಿವಾಣವನ್ನು ಅವನ ಮುಂದಿರಿಸಿತು. ಅದರಲ್ಲಿ ವಿವಿಧ ಆಹಾರ, ಪಾನಿಯಗಳು ತುಂಬಿದ್ದ ಹನ್ನೆರಡು ಬಟ್ಟಲುಗಳಿದ್ದುವು. ಭೂತ ಅದೃಶ್ಯವಾಯಿತು.




ನಂತರ ಅಲ್ಲಾದೀನ ತನ್ನ ತಾಯಿಗೆ ಉಪಚಾರಗೈದು, ಆಕೆಯನ್ನು ಎಬ್ಬಿಸಿದನು. ಆಕೆ ಕಣ್ಣುತೆರೆದು ಬೆಳ್ಳಿಯ ತಾಟಿನಲ್ಲಿದ್ದ ತಿಂಡಿತೀರ್ಥಗಳನ್ನು ನೋಡಿ ಬೆರಗಾಗಿ "ಇವೆಲ್ಲಾ ಎಲ್ಲಿಯವೋ ಮಗು. ನಾವು ಪಡುತ್ತಿರುವ ಬವಣೆ ಸುಲ್ತಾನರಿಗೆ ತಿಳಿದು ಅವರು ಕಳುಹಿಸಿಕೊಟ್ಟರೇ?" ಎಂದು ಕೇಳಿದಳು. "ಆ ಸಂಗತಿಗಳನ್ನು ನಂತರ ಹೇಳುತ್ತೇನೆ. ಮೊದ ಊಟವಾಗಲಿ" ಎಂದ ಅಲ್ಲಾದೀನ್.

ಪಾಪ, ಆ ಬಡವಳು ಅಂಥ ಭಕ್ಷಭೋಜ್ಯಗಳನ್ನು ಎಂದೂ ನೋಡಿದವಳಲ್ಲ. ಅದು ಶ್ರೀಮಂತರ ಮನೆಗಳಲ್ಲಿ ತಯಾರಾಗುವ ಪದಾರ್ಥಗಳು. ಆ ಬೆಳ್ಳಿತಾಟಿನ ಬೆಲೆ ಸಹ



ಆ ತಾಯಿ ಮಕ್ಕಳರಿಯರು. ಅವರೆಂದೂ ಬೆಳ್ಳಿಯ ವಸ್ತುಗಳನ್ನು ಕೊಂಡಿರಲಿಲ್ಲ.

ಅವರಿಬ್ಬರೂ ತಮ್ಮ ಕ್ಷುದ್ಬಾಧೆಯನ್ನು ತೀರಿಸಿಕೊಂಡ ನಂತರ ಇನ್ನೂ ಎರಡು ಹೊತ್ತು ಊಟಕ್ಕೆ ಆಗುವಷ್ಟು ಅನ್ನಪಾನೀಯಗಳು ಉಳಿದುಹೋದವು. ಆಕೆ ತನ್ನ ಮಗನನ್ನು ಕುರಿತು "ಮಗೂ, ಇನ್ನು ನೀನು ಹಸಿವೆಂದು ಹೇಳಲಾರೆ. ಅದೇ ನನಗೊಂದು ತೃಪ್ತಿ. ಅಂದ ಹಾಗೆ ಆ ಭೂತವೇನಾಯಿತು?" ಎಂದು ಕೇಳಿದಳು.

ತಾನು ಮೂರ್ಛೆಗೊಂಡ ನಂತರ ನಡೆದ ಸಂಗತಿಯನ್ನು ತಿಳಿದು "ಹಾಗೆಂದರೆ ಮಾನವರಿಗೆ ಭೂತಗಳು ಕಾಣಿಸುವ ಮಾತು ನಿಜವೆಂದಾಯಿತು. ನಿನ್ನನ್ನು ಆ ಗುಹೆಯಿಂದ ಬಿಡಿಸಿದ ಭೂತ ಇದೇ ಇರಬಹುದು" ಎಂದಳು ಅಲ್ಲಾದೀನ್‌ನ ತಾಯಿ.

"ಅಲ್ಲಾಮ್ಮಾ, ನನ್ನನ್ನು ಗುಹೆಯಿಂದ ಬಿಡಿಸಿದ್ದು ಬೇರೆ ಭೂತ. ಅದು ಉಂಗರದ ಭೂತ. ಈಗ ನಮಗೆ ಕಾಣಿಸಿದುದು ದೀಪದ ಭೂತ. ಇವೆರಡರ ಆಕಾರ ಆಚಾರಗಳಲ್ಲಿ ಬಹಳ ಭೇದವಿದೆ." ಎಂದ ಅಲ್ಲಾದೀನ್.

"ನಮಗೇಕೆ ಮಗೂ ಈ ಭೂತಪ್ರೇತಗಳ ಗೊಡವೆ? ಆ ಉಂಗರ, ಈ ದೀಪವನ್ನು ಎತ್ತಲಾದರೂ ಬಿಸಾಡು ಮಗು. ನಿನಗೆ ಪುಣ್ಯಬರುತ್ತಿದೆ" ಎಂದಳು ಅಲ್ಲಾದೀನನ ತಾಯಿ ಭಯದಿಂದ.

"ಅವು ನಮಗೆ ಉಪಕಾರಮಾಡಲಿಲ್ಲವೇ?" ಎಂದ ಅಲ್ಲಾದೀನ.



"ನಾವು ಭೂತಗಳೊಂದಿಗೆ ಸಂಪರ್ಕ ಇಟ್ಟುಕೊಳ್ಳುವುದು ತಪ್ಪು. ಅದರಗೊಡವೆ ನಮಗೆ ಬೇಡಾಪ್ಪಾ" ಎಂದು ಅಂಗಲಾಚಿ ದಳು ಅವನತಾಯಿ.

"ಅಮ್ಮಾ ನೀನೇ ನಿಧಾನವಾಗಿ ಆಲೋಚಿಸಿ ಹೇಳು. ನಮಗೆ ಮತ್ತೆ ಹಸಿವಾಗುತ್ತದೆ. ಆಗ ನಾವು ಏನು ತಿನ್ನಬೇಕು? ಆ ಮಾಂತ್ರಿಕನು ಮೊರಾಕೋ ದೇಶದಿಂದ ಪಡಲಾರದ ಪಾಡುಪಟ್ಟು ನಮ್ಮ ದೇಶಕ್ಕೇಕೆ ಬಂದನೋ ನಿನಗೆ ತಿಳಿದಿದೆಯೇ? ಈ ದೀಪಕ್ಕಾಗಿಯೇ ಅವನು ಅಷ್ಟೊಂದು ಪ್ರಯಾಸಪಟ್ಟನು. ಆ ಗುಹೆಯಲ್ಲಿ ಯಥೇಚ್ಛವಾಗಿ ಬಂಗಾರವಿದೆ. ಆದರೆ ಅವನು ಅದಕ್ಕಾಗಿ ಹಾತೊರೆಯಲಿಲ್ಲ. ನಾನು ದೀಪವನ್ನು ಕೊಡಲಿಲ್ಲವೆಂದು ಕುಪಿತನಾಗಿ ಗುಹೆಯ ದ್ವಾರವನ್ನು ಮುಚ್ಚಿ, ಹೊರಟುಹೋದನು. ಈ ದೀಪ ತುಂಬಾ ಪ್ರಭಾವಶಾಲಿಯಾದುದು. ಇದನ್ನು ನಮ್ಮ ಪ್ರಾಣಕ್ಕಿಂತಲೂ ಮಿಗಿಲಾಗಿ ನೋಡಿಕೊಳ್ಳುತ್ತಿರಬೇಕು. ಇದರ ವಿಷಯ ಯಾರಿಗೂ ತಿಳಿಯ ಬಾರದು. ಇನ್ನು ಈ ಉಂಗುರದ ವಿಷಯ? ಅದು ನನ್ನನ್ನು ಒಂದು ಸಾರಿ ಸಾವಿನ ದವಡೆಯಿಂದ ಕಾಪಾಡಿತು. ನಾಳೆ ನನಗೆ ಇನ್ನೊಂದು ಪ್ರಮಾದ ವೊದಗಬಹುದು. ಆಗ ನನಗೆ ಅದರ ಸಹಾಯ ಅಗತ್ಯವಾಗಿ ಬೇಕಾಗುವುದು. ಅದನ್ನು ನಾನು ಹೇಗೆ ಹೊರಗೆಸೆಯಲಿ? ಅದು ನನ್ನ ಬೆರಳಲ್ಲೇ ಇರಬೇಕು. ದೀಪವನ್ನು ಕಂಡು ನೀನು ಹೆದರುವುದಾದರೆ, ಅದನ್ನು ನಿನ್ನ





ಕಣ್ಣಿಗೆ ಬೀಳದಂತೆ ಎಲ್ಲಾದರೂ ಬಚ್ಚಿಡು ವೆನು.'' ಎಂದ ಅಲ್ಲಾದೀನ.

"ನಿನ್ನಿಷ್ಟ ಮಗು. ನಾನೇಕೆ ಬೇಡವೆಂದು ಹೇಳಲಿ? ಆದರೆ ನಾನುಮಾತ್ರ ಇನ್ನು ಮುಂದೆ ಭೂತಗಳನ್ನು ನೋಡಲಾರೆನಪ್ಪ.'' ಎಂದಳು ತಾಯಿ.

ಭೂತ ತಂದುಕೊಟ್ಟ ಆಹಾರ ಮಾರ ನೇಯದಿನ ಮುಗಿದುಹೋಯಿತು. ದೊಡ್ಡ ಬೆಳ್ಳಿಹರಿವಾಣ, ಅದರಲ್ಲಿದ್ದ ಹನ್ನೆರಡು ಚಿಕ್ಕ ಪಾತ್ರೆಗಳು ಮಾತ್ರ ಉಳಿದಿದ್ದುವು. ಅಲ್ಲಾ ದೀನ್ ಒಂದು ಬಟ್ಟಲನ್ನು ತೆಗೆದುಕೊಂಡು ಪೇಟೆಗೆ ಹೋಗಿ ಅದನ್ನು ಯಹೋದಿ ವ್ಯಾಪಾರಿಯೊಬ್ಬನಿಗೆ ತೋರಿಸಿದನು. ವ್ಯಾಪಾರಿ ಅಲ್ಲಾದೀನನಕಡೆ ನೋಡಿ "ಇದನ್ನು ಎಷ್ಟಕ್ಕೆ ಮಾರುವೆ?'' ಎಂದು ಕೇಳಿದ. "ಅದರ ಬೆಲೆ ನಿನಗೆ ತಿಳಿಯದೇ?'' ಎಂದ ಅಲ್ಲಾದೀನ್ ಗಡುಸಾಗಿ.

ಆ ವರ್ತಕ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಲುಕಿ ಕೊಂಡನು. ಬಟ್ಟಲಿನ ಬೆಲೆ ಅಲ್ಲಾದೀನನಿಗೆ ಗೊತ್ತಿರಬಹುದು; ಗೊತ್ತಿಲ್ಲದಿರಬಹುದು. ಕಡಿಮೆ ಬೆಲೆ ಹೇಳಿದರೆ ಅವನು ತನ್ನಮೇಲೆ ರೇಗಿಬೀಳಬಹುದು; ಹೆಚ್ಚುಕೊಟ್ಟರೆ ತನಗೆ ವೃಥಾ ನಷ್ಟ. ಬಹಳಹೊತ್ತು ಯೋಚಿಸಿದ ನಂತರ ತನ್ನ ಕಿಸೆಯಿಂದ ಬಂದು ಮೊಹರಿ ಯನ್ನು ತೆಗೆದನು. ಆ ಚಿನ್ನದ ನಾಣ್ಯವನ್ನು ಕಂಡಕೂಡಲೇ ಅಲ್ಲಾದೀನನ ಕಣ್ಣುಗಳು ಮಿನುಗಿದುವು. ಸಡಗರದಿಂದ ಕೈಚಾಚಿ ಅದನ್ನು ತೆಗೆದುಕೊಂಡು ಮನೆಗೆ ಓಡಿದನು. ಆ ಬಟ್ಟಲಿನ ಬೆಲೆ ಅವನಿಗೆ ತಿಳಿಯದೆಂದೂ, ಇನ್ನಷ್ಟು ಕಡಿಮೆ ಬೆಲೆ ಕೊಟ್ಟದ್ದರೂ ಸ್ವೀಕರಿ ಸುತ್ತಿದ್ದನೆಂದೂ ಗ್ರಹಿಸಿ, ಆ ವ್ಯಾಪಾರಿ ತನ ಗಾದ ನಷ್ಟಕ್ಕೆ ಪರಿತಾಪಪಟ್ಟನು!

ಅಲ್ಲಾದೀನನು ಚಿನ್ನದ ನಾಣ್ಯವನ್ನು ತಾಯಿಗೊಪ್ಪಿಸಿದ. ಆಕೆ ಅಂಗಡಿ ಬೀದಿಗೆ ಹೋಗಿ ಮನೆಗೆ ಆವಶ್ಯಕವಾದ ವಸ್ತುಗಳನ್ನು ತಂದಳು. ಹಣ ಮುಗಿದ ಕೂಡಲೇ ಅಲ್ಲಾ ದೀನ್ ಮತ್ತೊಂದು ಬಟ್ಟಲನ್ನು ತೆಗೆದು ಕೊಂಡು ಹೋಗಿ ಅದೇ ವ್ಯಾಪಾರಿಗೆ ಮಾರಿದ. ಹಿಂದೆಕೊಟ್ಟಷ್ಟೇ ಈ ಸಲವೂ ಆ ವ್ಯಾಪಾರಿ ಚಿನ್ನದ ನಾಣ್ಯಕೂಡಲೇ ಬೇಕಾಯಿತು. ಈ ರೀತಿ ಹನ್ನೆರಡು ಬಟ್ಟಲುಗಳನ್ನು



ಮಾರಿ ಬಂದ. ಆ ಹಣವೆಲ್ಲಾ ಖರ್ಚಾದ ನಂತರ ಬೆಳ್ಳಿತಟ್ಟೆಮಾತ್ರ ಉಳಿಯಿತು. ಅದು ತುಂಬಾ ಭಾರವಾಗಿತ್ತು. ಅದರಿಂದ ಅಲ್ಲಾ ದೀನನು ವ್ಯಾಪಾರಿಯನ್ನೇ ತನ್ನ ಮನೆಗೆ ಬರುವಂತೆ ಹೇಳಿದ. ವ್ಯಾಪಾರಿ ಮನೆಗೆ ಬಂದು, ತಟ್ಟೆನೋಡಿ ಅಲ್ಲಾದೀನನ ಕೈಯಲ್ಲಿ ಹತ್ತು ಮೊಹರುಗಳನ್ನಿಟ್ಟು ತಟ್ಟೆಯನ್ನು ತೆಗೆದುಕೊಂಡು ಹೋದ.

ಆ ಹಣವೂ ಖರ್ಚಾಯಿತು. ಅಲ್ಲಾ ದೀನನು ತಾಯಿಯನ್ನು ಯಾವುದೋ ನೆಪ ಹೇಳಿ ಮನೆಯಿಂದ ಹೊರಗೆ ಕಳುಹಿಸಿ, ದೀಪ ವನ್ನು ತೆಗೆದು ತಿಕ್ಕಿದನು. ಭೂತ ಪ್ರತ್ಯಕ್ಷ ವಾಯಿತು. "ಹಸಿವಾಗಿದೆ. ಕೂಡಲೇ ಊಟ ತೆಗೆದುಕೊಂಡು ಬಾ" ಎಂದು ಭೂತಕ್ಕೆ ಆಜ್ಞೆಯಿತ್ತನು. ಭೂತ ಮತ್ತೊಮ್ಮೆ ದೊಡ್ಡ ತಾಂಬಾಣದಲ್ಲಿ ಹನ್ನೆರಡು ಬಟ್ಟಲುಗಳ ತುಂಬಾ ವಿವಿಧ ಭಕ್ಷ್ಯಭೋಜ್ಯಗಳನ್ನು ತಂದಿಟ್ಟು ಮಾಯವಾಯಿತು.

ಕೊಂಚಹೊತ್ತಾದ ನಂತರ ಅಲ್ಲಾದೀನನ ತಾಯಿ ಮನೆಗೆ ಬಂದಳು. ಭಕ್ಷ್ಯಭೋಜ್ಯಗ ಳನ್ನು ಕಂಡು ಹಿರಿಹಿರಿಹಿಗ್ಗಿದಳು. "ಆ ಭೂತ ಮತ್ತೆ ಬಂತೇ? ಅದರ ಹೊಟ್ಟೆ ತಣ್ಣಗಿರಲಿ. ಆದರೆ ಅದನ್ನು ನಾನು ಮಾತ್ರ ನೋಡಲಾರೆ" ಎಂದಳು. ತರುವಾಯ ತಾಯಿಮಕ್ಕಳು ಎರಡು ದಿನ ನಿಶ್ಚಿಂತೆಯಿಂದ ಊಟಮಾಡಿದರು. ಮತ್ತೆ ಅಲ್ಲಾದೀನನು ಬಟ್ಟಲನ್ನು ಮಾರಲು ಪೇಟೆಗೆ ತೆಗೆದುಕೊಂಡು ಹೋದನು.




ದಾರಿಯಲ್ಲಿ ಒಬ್ಬ ಅಕ್ಕಸಾಲಿಗನ ಅಂಗಡಿ ಯಿತ್ತು. ಆ ಅಕ್ಕಸಾಲಿ ತುಂಬಾ ನ್ಯಾಯ ಶಾಲಿ, ಶೀಲವಂತ. ಆತನು ಅಲ್ಲಾದೀನನನ್ನು ಕಂಡು "ಎಲೇ, ತಮ್ಮಾ, ನೀನು ಆಗಾಗ ಯಾವುದೋ ಸಾಮಾನನ್ನು ತೆಗೆದುಕೊಂಡು ಹೋಗಿ ಆ ಗಿರಣಿವ್ಯಾಪಾರಿಗೆ ಮಾರುತ್ತಿರು ವಂತೆ ತೋರುತ್ತದೆ. ಅವರು ಬಹಳ ಮೋಸ ಗಾರರು. ಅದೇನು ಮಾರುವೆಯೋ ನನಗೇ ಮಾರಕೂಡದೇ? ನಾನು ನಿನಗೆ ಮೋಸ ಮಾಡುವುದಿಲ್ಲ" ಎಂದ.

ಅಲ್ಲಾದೀನ್ ಕಂಕುಳಲ್ಲಿದ್ದ ಬಟ್ಟಲನ್ನು ಅಕ್ಕಸಾಲಿಗನಿಗೆ ತೋರಿಸಿದನು. ಆತನು ಅದನ್ನು ತ್ರಾಸಿನಲ್ಲಿಟ್ಟು "ಇದರ ಬೆಲೆ ಇಪ್ಪತ್ತು ಮೊಹರುಗಳು. ನಿನಗೆ ಆ ವ್ಯಾಪಾರಿ



ಎಷ್ಟು ಕೊಟ್ಟ?" ಎಂದು ಕೇಳಿದ. "ನೀಚ, ಒಂದೇ ಚಿನ್ನದನಾಣ್ಯ ಕೊಟ್ಟ. ಅವನ ಮನೆ ಹಾಳಾಗ" ಎಂದು ಹೇಳಿ, ಅಲ್ಲಾದೀನ್ ಆ ಬಟ್ಟಲನ್ನು ಅಕ್ಕಸಾಲಿಗನಿಗೆ ಮಾರಿ, ಹಣ ಪಡೆದು ಮನೆಗೆ ಹೋದನು.

ಅಂದು ಮೊದಲುಗೊಂಡು ಅಲ್ಲಾದೀನ್ ಬೆಳ್ಳಿಬಟ್ಟಲುಗಳನ್ನು ಅಕ್ಕಸಾಲಿಗನಿಗೆ ಮಾರುತ್ತಿದ್ದನು. ಕ್ರಮೇಣ ಅವನ ಬಳಿ ಹಣಕೂಡಿತು. ಆದರೆ ಅಲ್ಲಾದೀನ್ ಆಡಂಬರ ಜೀವನ ನಡೆಸಲು ಪ್ರಯತ್ನಿಸಲಿಲ್ಲ. ಅಗತ್ಯವಾದುದಕ್ಕೆ ಮಾತ್ರ ಖರ್ಚುಮಾಡುತ್ತಿದ್ದನು. ಹಣ ಪೋಲು ಮಾಡುತ್ತಿರಲಿಲ್ಲ. ಅವನ ತಾಯಿಸಹ ಎಂದಿನಂತೆ ಸಾಮಾನ್ಯವಾದ ಉಡುಪುಗಳನ್ನು ಧರಿಸಿ ನಿರಾಡಂಬರ ಜೀವನ ಸಾಗಿಸುತ್ತಿದ್ದಳು.

ಕ್ರಮೇಣ ಅಲ್ಲಾದೀನನಲ್ಲಿ ಬದಲಾವಣೆ ತೋರಿತು. ಸೋಮಾರಿತನದ ಲಕ್ಷಣಗಳು ಮಾಯವಾದುವು. ಅವನು ಪ್ರತಿದಿನ ಸರಾಫು ಕಟ್ಟೆಗೆ ಹೋಗಿ ಅಲ್ಲಿನ ವ್ಯಾಪಾರಸ್ಥರೊಂದಿಗೆ ಸ್ನೇಹ ಸಂಪಾದಿಸಿದನು. ರತ್ನಪಡಿ ವ್ಯಾಪಾರಿಗಳ ಬಳಿಗೆ ಹೋಗಿ ವ್ಯಾಪಾರ ಸೂಕ್ಷ್ಮಗಳನ್ನು ತಿಳಿದುಕೊಳ್ಳುವನು.

ಅವರ ಸಂಪರ್ಕದಿಂದ ಅವನೊಂದು ವಿಷಯವನ್ನು ಅರಿತುಕೊಂಡನು. ಮಾಂತ್ರಿಕನು ತನ್ನನ್ನು ಗುಹೆಗೆ ಕಳುಹಿಸಿದಾಗ ಅಲ್ಲಿದ್ದ ತೋಟದಿಂದ ತಾನು ಕಿತ್ತುಕೊಂಡು ಬಂದ ಫಲಗಳು ಸಾಮಾನ್ಯ ಗಾಜಿನ ಚೂರುಗಳಲ್ಲವೆಂತಲೂ, ಅವು ಅಮೂಲ್ಯವಾದ ರತ್ನಗಳೆಂತಲೂ ಅವನು ಗ್ರಹಿಸಿದನು. ತನ್ನ ಹತ್ತಿರವಿರುವಂತಹ ರತ್ನಗಳು ಸುಲ್ತಾನರ ಬಳಿಯಲ್ಲೂ ಇರಲಾರವೆಂದು ಅವನು ತಿಳಿದುಕೊಂಡನು. ರತ್ನಪಡಿ ವ್ಯಾಪಾರಿಗಳ ಬಳಿಯಿದ್ದ ಬೆಲೆಬಾಳುವ ಮುತ್ತು ಮಾಣಿಕ್ಯಗಳನ್ನೆಲ್ಲಾ ಅಲ್ಲಾದೀನನು ನೋಡಿದ್ದನು. ಆದರೆ ಅವುಗಳು ತನ್ನ ಹತ್ತಿರಲಿದ್ದ ಮಾಣಿಕ್ಯಗಳ ಮುಂದೆ ತೀರಾಸಾಮಾನ್ಯವಾದುವು!

ಅವನು ಈ ವಿಷಯವನ್ನು ಗ್ರಹಿಸಿದ ಕೆಲವುದಿನಗಳಿಗೆ ಒಂದು ವಿಚಿತ್ರ ನಡೆಯಿತು. ಒಂದು ಮುಂಜಾನೆ ನಗರದ ಸರಾಫುಕಟ್ಟೆಗೆ ಹೋಗುತ್ತಿರಲು ರಾಜಭಟರು ಎಲ್ಲ ಅಂಗಡಿಗಳ ಕದಮುಚ್ಚಿಸುತ್ತಿದ್ದರು. ಆ ದಾರಿಯಲ್ಲಿ ರಾಜಕುಮಾರಿ ಸ್ನಾನಗೃಹಕ್ಕೆ ಹೋಗುವಳಂತೆ.

ಆದುದರಿಂದ ಆ ಬೀದಿಯಲ್ಲಿರುವ ವರ್ತಕರು ಅಂಗಡಿಯ ಬಾಗಿಲುಗಳನ್ನೆಲ್ಲಾ ಮುಚ್ಚಿ, ಮನೆಗೆ ಹೋಗಬೇಕೆಂತಲೂ, ಬೀದಿಯಲ್ಲಿ ಯಾರೂ ಸುಳಿಯಬಾರದೆಂದೂ, ಹಾಗೇನಾದರೂ ಆಜ್ಞೆಯನ್ನು ಉಲ್ಲಂಘಿಸಿದರೆ ಅವರಿಗೆ ಮರಣದಂಡನೆ ವಿಧಿಸಲಾಗುವುದೆಂದೂ ಭಟರು ಎಚ್ಚರಿಕೆ ಕೊಡುತ್ತಿದ್ದರು. ಇದನ್ನು ಕೇಳಿದ ಅಲ್ಲಾದೀನನಿಗೆ ಹೇಗಾದರೂ ರಾಜಕುಮಾರಿಯನ್ನು ನೋಡುವ ಕುತೂಹಲ ವುಂಟಾಯಿತು. ರಾಜಕುಮಾರಿ ಬುದೂರ್ ತುಂಬಾ ಸುಂದರಿ ಎಂದು ಜನರಾಡಿಕೊಳ್ಳುವುದನ್ನು ಅವನು ಕೇಳಿದ್ದನು.

ಯಾರ ಕಣ್ಣಿಗೂ ಬೀಳದೆ ರಾಜಕುಮಾರಿಯನ್ನು ನೋಡಲು ಸಾಧ್ಯವಾಗುವಸ್ಥಳಕ್ಕಾಗಿ ಅತ್ತಿತ್ತ ನೋಡಿದನು. ಸ್ನಾನಶಾಲೆಯ ಬಾಗಿಲ ಹಿಂದೆ ಅವಿತುಕೊಂಡರೆ ಬುದೂರ್ ಅಲ್ಲಿಗೆ ಆಗಮಿಸಿದಾಗ ನೋಡಲು ಸಾಧ್ಯವಾದೀತೆಂದು ಅವನಿಗೆ ತೋರಿತು. ಕೂಡಲೇ ಅಲ್ಲಾದೀನ್ ಸ್ನಾನಶಾಲೆಯಕಡೆ ಓಡಿದ. ಸ್ನಾನಶಾಲೆಯದ್ವಾರ ತುಂಬಾ ದೊಡ್ಡದು. ಅದರ ಬಾಗಿಲ ಹಿಂದೆ ಯಾರಿಗೂ ಕಾಣಿಸದಂತೆ ಅವಿತುಕೊಂಡು, ರಾಜಕುಮಾರಿಯ ಆಗಮನವನ್ನು ನಿರೀಕ್ಷಿಸುತ್ತಿದ್ದ.

ರಾಜಕುಮಾರಿ ಬುದೂರ್ ಅರಮನೆಯಿಂದ ಹೊರಟು, ನಿರ್ಜನವಾದ ಬೀದಿಯಲ್ಲಿ ನಡೆಯುತ್ತಾ ಬಂದಳು. ಸ್ನಾನಶಾಲೆಯಲ್ಲಿ ಅಡಿಯಿಡುತ್ತಲೇ ಆಕೆ ತನ್ನ ಮುಖದಮೇಲಿನ ಮುಸುಕನ್ನು ತೆಗೆದುಹಾಕಿದಳು. ಅಲ್ಲಾದೀನ ನೋಡಿದನು. ಆಕೆಯ ಮುಖ ಚಂದ್ರಬಿಂಬಕ್ಕಿಂತಲೂ ಅಂದವಾಗಿತ್ತು. "ಆಹಾ, ಇಂತಹ ಸೌಂದರ್ಯರಾಶಿಯನ್ನು ಸೃಷ್ಟಿಸಿದ ದೇವನ ಮಹಿಮೆಯನ್ನು ಎಷ್ಟುಕೊಂಡಾಡಲಿ" ಎಂದುಕೊಂಡ ಅಲ್ಲಾದೀನ್.

ಅದುವರೆವಿಗೆ ಅಲ್ಲಾದೀನ್ ಎಲ್ಲ ಸ್ತ್ರೀಯರೂ ತನ್ನ ತಾಯಿಯಂತೆಯೇ ಇರುವರೆಂದು ಭಾವಿಸಿದ್ದ. ಅವರಲ್ಲಿ ಪ್ರತ್ಯೇಕವಾದ ಅಂದಚೆಂದಗಳಿರುವುವೆಂದು ಅವನು ಎಣಿಸಿರಲಿಲ್ಲ. ಆದರೆ ರಾಜಕುಮಾರಿ ಬುದೂರ್‌ನ್ನು ಕಂಡ ಕ್ಷಣದಿಂದ ಅವನಲ್ಲಿ ಪ್ರೇಮಭಾವ ತುಂಬಿತು.

[ಇನ್ನೂ ಇದೆ]



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. 10

1958 ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಡಿಸೆಂಬರ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: **ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು - 26.**

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಮೊದಲು ಬರೆದೋದಿ ಮತ್ತೆ ಆಡಿದರೆ,

ಎರಡನೇ ಫೋಟೋ: ಮುಂದೆ ಹೀಗೆ ಮೇಲೇರಬಹುದು!

ಕಳಿಸಿದವರು: ಶ್ರೀಮತಿ ಸರಸ್ವತಿಬಾಯಿ,

ತಲಿಪಾಡಿ ಗ್ರಾಮ, ಕಿನಿಗೋಲಿ, ದ. ಕನ್ನಡ.

**ಬಹುಮಾನ ರೂ. 10/-ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.**

# ವಿಚಿತ್ರ ಸ್ತನ್ಯಜಂತುಗಳು

ಮರಿಗಳಿಗೆ ಹಾಲೂಡುವ ಪ್ರಾಣಿಗಳಲ್ಲಿ ಅತಿ ಪುರಾತನವಾದುವು ಕೆಲವು ಆಸ್ಟ್ರೇಲಿಯಾದಲ್ಲಿವೆ. ಬೇರೆ ಪ್ರಾಂತಗಳಲ್ಲಿಯೂ ಎಂದೋ ಒಮ್ಮೆ ಇಂತಹ ಜಂತುಗಳಿದ್ದಿರಬಹುದು. ಆದರೆ ಅವು ಇತರ ಹಾಲೂಡುವ ಪ್ರಾಣಿಗಳೊಂದಿಗೆ ಸ್ಪರ್ಧಿಸಲಾರದೆ ಅಂತರಿಸಿಹೋದುವು. ಆಸ್ಟ್ರೇಲಿಯಾದ ಸುತ್ತಲೂ ಸಮುದ್ರವು ಭದ್ರಕೋಟೆಯಂತಿರುವುದರಿಂದ ಅಲ್ಲಿನವು ದಕ್ಕಿಕೊಂಡುವೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಈ ವಿಚಿತ್ರ ಜಂತುಗಳಲ್ಲಿ ನಾಲ್ಕು ಜಾತಿಗಳನ್ನು ಕುರಿತು ಸ್ವಲ್ಪ ತಿಳಿದುಕೊಳ್ಳೋಣ.

ಇವುಗಳಲ್ಲಿ 'ಬಾತುಮೂತಿ' ಎಂಬುದೊಂದು. ಸ್ತನ್ಯಪ್ರಾಣಿಗಳಂತೆ ಅದರ ಶರೀರದಲ್ಲಿ ರೋಮಗಳಿವೆ. ಆದರೆ ಬಾತುಕೋಳಿಯಂತೆ ಕೊಕ್ಕು ಅದಕ್ಕಿದೆ. ಬಾತುಕೋಳಿಯಂತೆ ಮೊಟ್ಟೆಯನ್ನು ಇಡುತ್ತದೆ. ಇದರ ಪಾದಗಳೂ ಜಾಲಪಾದಗಳೇ. ಇದು ನೀರಿನಲ್ಲಿ ಮುಳುಗಿ ತಳದ ಕೆಸರಿನಲ್ಲಿರುವ ಜಲಚರಗಳನ್ನು ತನ್ನ ಕೊಕ್ಕುಮೂತಿಯಿಂದ ಮೇಲಕ್ಕೆತ್ತಿಕೊಂಡು ತಿನ್ನುತ್ತದೆ. ಇದು ಪ್ರವಾಹಗಳ ದಂಡೆಯಲ್ಲಿ ಮಾಟೆಗಳಲ್ಲಿ ವಾಸಮಾಡುತ್ತದೆ. ಈ ಮಾಟೆಗಳು ಮೂವತ್ತು ಅಡಿ ನೀಳವಾಗಿರುವುದೂ ಉಂಟು. ಈ ಹೆಣ್ಣು 'ಬಾತುಮೂತಿ' ಒಂದರಿಂದ ಮೂರು ಮೊಟ್ಟೆಗಳವರೆಗೆ ಇಡುತ್ತದೆ. ಮೊಟ್ಟೆ ಕಾವಾಗಿ ಮರಿಗಳಾದಾಗ ಅವು ತಾಯಿಯ ಹಾಲು ಕುಡಿಯುತ್ತ ಸ್ವಲ್ಪಕಾಲ ಅಸಹಾಯಕ ಸ್ಥಿತಿಯಲ್ಲಿರುತ್ತವೆ. ಗಂಡು ಬಾತುಮೂತಿಯ ಹಿಂದಿನ ಕಾಲುಗಳಲ್ಲಿ ವಿಷತುಂಬಿದ ಸಂದುಗಳಿವೆ. ಸೃಷ್ಟಿಯಲ್ಲಿ ವಿಷಪೂರಿತ ಸ್ತನ್ಯಜಂತುವೆಂದರೆ 'ಬಾತುಮೂತಿ'ಯೊಂದೇ.

'ಎಕಿಡ್ನಾ' ಎಂಬ ಇನ್ನೊಂದು ವಿಚಿತ್ರಮೃಗವೂ ಮೊಟ್ಟೆಯಿಡುತ್ತದೆ. ಆದರೆ ಇಟ್ಟ ಮೊಟ್ಟೆಗಳನ್ನು ಅದು ಕೂಡಲೇ ತನ್ನ ಹೊಟ್ಟೆಯಲ್ಲಿರುವ ಸಂಚಿಯೊಳಗೆ ಹಾಕಿಕೊಳ್ಳುತ್ತದೆ. ಈ ಸಂಚಿಯೊಳಗೆ ಮೊಟ್ಟೆಗಳು ಮರಿಗಳಾಗಿ ಕೆಲವು ವಾರಗಳವರೆಗೆ ಇರುತ್ತವೆ. ಇದರ



ಸಂಚಿಯಲ್ಲಿ ಒಂದೇಸಾರಿ ಎರಡು ಮರಿಗಳಿಗೆ ಸ್ಥಳವಿರುತ್ತದೆ. ಈ ಪ್ರಾಣಿಯ ಶರೀರದಲ್ಲಿ ಕೂದಲಿಗೆ ಬದಲಾಗಿ ಮುಳ್ಳುಗಳಿರುತ್ತವೆ. ಇದರ ಕಾಲಿನ ಉಗುರುಗಳು ಬಲವಾಗಿ ಇರುವೆಗಳ ಹುತ್ತವನ್ನು ನಿರ್ಮೂಲಿಸಲು ಅನುಕೂಲವಾಗಿರುತ್ತವೆ. ಇದರ ಮೂತಿಯೂ ನಾಲಗೆಯೂ ಬಲು ಉದ್ದವಾಗಿ ಇರುವೆಗಳನ್ನು ತಿನ್ನಲು ಸೌಕರ್ಯವಾಗಿವೆ.

ಕೋ ಅಲಾ, ಕಂಗರೂ ಜಂತುಗಳಿಗೆಕೂಡಾ ಸಂಚಿಗಳಿವೆಯಾದರೂ ಅವು ಮೊಟ್ಟೆಯಿಡುವುದಿಲ್ಲ. ಮರಿಗಳನ್ನೇ ಪ್ರಸವಿಸುತ್ತವೆ. ಮರಿಗಳು ತೀರಾ ಚಿಕ್ಕವಾಗಿಯೂ, ಅಸಹಾಯಕವಾಗಿಯೂ, ತಾಯಿಯ ಚೀಲದಲ್ಲೇ ಬೆಳೆದು ತಮ್ಮ ಸಹಜಸ್ವರೂಪವನ್ನು ಹೊಂದುತ್ತವೆ. ಅವು ಚೀಲದೊಳಗಿಂದ ಹೊರಗೆ ಬಂದರೂಕೂಡ, ಆಪತ್ಸಮಯಗಳಲ್ಲಿ ಆ ಚೀಲದೊಳಗೇ ಅಡಗಿಕೊಳ್ಳುತ್ತವೆ.

ಕೋಅಲಾ ಎಂಬುದು ಒಂದು ಬಗೆಯ ಕರಡಿಜಾತಿ. ಅದು ಮರಗಳಮೇಲೆ ವಾಸಮಾಡುತ್ತದೆ. ಯೂಕಲಿಪ್ಟಸ್ ಎಲೆಗಳೇ ಅದರ ಮುಖ್ಯ ಆಹಾರ. ಇದರ ಮರಿಗಳು ಮೂರು ತಿಂಗಳವರೆಗೆ ತಾಯಿಯ ಚೀಲದೊಳಗಿದ್ದು, ತರುವಾಯ ಅನೇಕ ತಿಂಗಳವರೆಗೆ ತಾಯಿಯ ಬೆನ್ನಮೇಲೆ ಸವಾರಿಮಾಡುತ್ತವೆ. ಮರಿಗಳನ್ನು ಬೆನ್ನಿನಲ್ಲಿ ಹೊತ್ತುಕೊಂಡೇ ತಾಯಿ ಮರವನ್ನೇರುತ್ತದೆ; ಹಾರುತ್ತದೆ. ಇವು ಹಗಲು ನಿದ್ರಿಸುತ್ತವೆ.

ಕಂಗರೂಮರಿಗಳು ತಾಯಿಯ ಚೀಲದಲ್ಲೇ ಸವಾರಿಮಾಡುತ್ತವೆ. ಕಂಗರೂ ಒಂದೇ ಹಾರಿಕೆಗೆ ೨೫ ಅಡಿಗಳವರೆಗೂ ಹಾರುವುದರಿಂದ, ಚೀಲದಲ್ಲಿರುವ ಮರಿಗಳಿಗೆ ಈ ಸವಾರೀ ಬಲು ಜೋರಾಗಿದ್ದೀತು!

ಮೇಲೆ ಹೇಳಿದ ಮೃಗಗಳು ಆಸ್ಟ್ರೇಲಿಯಾಕ್ಕೆ ಸೇರಿದುವು. ಉತ್ತರ ಅಮೆರಿಕಾದಲ್ಲಿ ಕೂಡಾ ಒಂದು ವಿಚಿತ್ರ ಮೃಗವಿದೆ. ಅದರ ಹೆಸರು ಒ ಪಾಸಂ. ಇದುಕೂಡಾ ತನ್ನ ಚೀಲದೊಳಗೇ ಮರಿಗಳನ್ನಿಟ್ಟುಕೊಳ್ಳುತ್ತದೆ. ಆದರೆ ಇದು ಸರತಿಗೆ ೧೫ ಮರಿಗಳನ್ನು ಕೂಡಾ ಇಡಬಹುದು. ಇದರ ಮರಿಗಳೂ ತಾಯಿಯ ಬೆನ್ನಮೇಲೆ ಸವಾರಿಮಾಡುತ್ತವೆ. ಉತ್ತರ ಅಮೆರಿಕಾದಲ್ಲಿ ಈ ಪುರಾತನ ಜಂತುಗಳು ಹೇಗೆ ದಕ್ಕಿಕೊಂಡುವೋ ಊಹಿಸಲಾಗುವುದಿಲ್ಲ.



# ಚಿ ತ್ರ ಕ ಥೆ





ದೀಪಾವಳಿ ಸಮಯಕ್ಕೆ ವಾಸು ಮತ್ತು ಗೋಪಿಯರು ಪಟಾಕಿಸುಡುತ್ತಾ ಬೀದಿಯಲ್ಲಿ ಹೋಗುತ್ತಿದ್ದರು. 'ಟೈಗರ್' ಪಟಾಕಿ ಹಾರಿದಾಗಲೆಲ್ಲಾ ತಾನೂ ಹಾರಿ ಮೊರೆಯುತ್ತಿತ್ತು. ದಾರಿಯಲ್ಲೊಂದೆಡೆ ಯಾರದೋ ಬಿದ್ದುಹೋದ ಒಂದು ಪಾಟಾಕಿ ಗೊಂಚಲು ತೋರಿತು. ಒಂದು ದೊಡ್ಡನಾಯಿ ಅದೊಂದು ತಿನ್ನುವ ವಸ್ತುವೆಂದುಕೊಂಡು ಓಡಿಬಂದಿತು. ಗೋಪಿಯ ಕೈಯಲ್ಲಿದ್ದ ಬೆಂಕಿಯ ಹಗ್ಗವನ್ನು 'ಟೈಗರ್' ಕಚ್ಚಿಕೊಂಡು, ಆ ಪಟಾಕಿ ಗೊಂಚಲಿಗೆ ಹಚ್ಚಿಬಿಟ್ಟಿತು. ಅದು ಬಡಬಡನೆ ಸಿಡಿದಾಗ ಆ ದೊಡ್ಡನಾಯಿ ಹೆದರಿ ಓಡಿಹೋಯಿತು! ಟೈಗರಿಗೆ ಆನಂದವೇ ಆನಂದ!






Printed by B. NAGI REDDI at the B. N. K. Press (Private) Ltd., and Published by him for Chandamama Publications, from Madras 26.—Controlling Editor : SRI 'CHAKRAPANI

PRS 60

ಖೈದಿ ಎಲ್ಲಿದ್ದಾನೆ?





ಆತ Parry's ಪಾರೀಯವರ ಮಿಠಾಯಿ ಕೊಳ್ಳಲು ಹೋಗಿದ್ದಾನೆ

ಇದರಲ್ಲಿ ಅಶ್ಚರ್ಯವಿಲ್ಲ! ಪಾರೀಯವರ ಮಿಠಾಯಿಗಳು ಅಷ್ಟು ಮದುರ, ಅಷ್ಟು ಸ್ವಚ್ಛ, ಅಷ್ಟು ಆಕರ್ಷಕವಾಗಿವೆ....ಇಂದೇ ಸ್ವಲ್ಪ ಪಾರಿ ಮಿಠಾಯಿ ಮನೆಗೆ ಕೊಂಡುಹೋಗಿರಿ; ಅವು ಕುಟುಂಬದ ಎಲ್ಲರಿಗೆ ಹಬ್ಬವನ್ನುಂಟುಮಾಡುವುವು.

ಪಾರೀಸ್ ಕನ್‌ಫೆಕ್ಷನರೀ ಲಿಮಿಟೆಡ್ ★ ಮದರಾಸು ★ ಅವರ ತಯಾರಿಕೆ

Photo by Madangopal



ಬಹುಮಾನ ಪಡೆದ ಶೀರ್ಷಿಕೆ

**ಮುಂದೆ ಹೀಗೆ ಮೇಲೇರಬಹುದು!**

ಕಳಿಸಿದವರು : ಶ್ರೀಮತಿ ಸರಸ್ವತಿಬಾಯಿ

